

# ಕರ್ನಾಟಕ ಗಾಂಧಿ ಸ್ಮಾರಕ ನಿಧಿ

ಗಾಂಧಿ ಭವನ, ಕುಮಾರಪಾರ್ಕ್ ಪೂರ್ವ
ಬೆಂಗಳೂರು - 560001

https://gandhibhavan.in

# ಗಾಂಧಿ ಭವನ ಡಿಜಿಟಲ್ ಆರ್ಕೈವ್



#SERVANTSOFKNOWLEDGE
Scanning Is The New Spinning

https://archive.org/details/GandhiBhavan

**ಗಾಂಧೀಜಿಯವರ ವಿಚಾರಗಳನ್ನು ಪ್ರಸಾರಗೊಳಿಸಲು ಕೈಗೊಂಡಿರುವ ಡಿಜಿಟಲ್ ಮಾಧ್ಯಮ ಚಟುವಟಿಕೆ**



## ಗಾಂಧಿ ಸಂಚಯ

https://gandhi.sanchaya.net



## ಕರ್ನಾಟಕ ಗಾಂಧಿ ಸ್ಮಾರಕ ನಿಧಿ

ಎಲ್ಲ ಪ್ರಕಟಣೆಗಳು ಈ ಜಾಲತಾಣದಲ್ಲಿ ಉಚಿತವಾಗಿ ಲಭ್ಯ



## ಬಾಪೂ ಪ್ರಪಂಚ

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಮಾಸಿಕ
'ಬಾಪೂ ಪ್ರಪಂಚ ' ಇ - ಪುಸ್ತಕ ಇಲ್ಲಿ ದೊರೆಯುತ್ತದೆ.








ಕರ್ನಾಟಕ ಗಾಂಧಿ ಸ್ಮಾರಕ ನಿಧಿ


**ಬಾಪು ಪ್ರಪಂಚ**
ಕನ್ನಡ–ಇಂಗ್ಲೀಷ್ ಮಾಸಿಕ

**BAPU PRAPANCHA**
(A monthly Kannada English Magazine of Gandhian Thoughts)

ಪ್ರಧಾನ ಸಂಪಾದಕರು
**ನಾಡೋಜ ಡಾ. ವೂಡೇ ಪಿ. ಕೃಷ್ಣ**

Chief Editor :
**Nadoja Dr Wooday P Krishna**

ಸಂಪಾದಕರು :
**ಎನ್. ಆರ್. ವಿಶುಕುಮಾರ್**

Editor :
**N R Vishukumar**

**ಪ್ರಕಾಶಕರು :**
**ಕಾರ್ಯದರ್ಶಿ,**
**ಕರ್ನಾಟಕ ಗಾಂಧಿ ಸ್ಮಾರಕ ನಿಧಿ**
ಗಾಂಧಿ ಭವನ, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001

Published by :
**Secretary**
**Karnataka Gandhi Smaraka Nidhi**
Gandhi Bhavana, Kumara Park East
Bangalore - 560 001

080 22261967 / 9738605799
gandhibhavanabengaluru@gmail.com

Printed at :
**Printastic**
272, 2nd Main Road, 6th Cross,
Lavakushanagar, Laggere Bangalore-58
Ph : +91 9886747417
E-mail : printastic.21@gmail.com





Design : **Ujwal Creations,** Bangalore



ರೂ. 28/– **BAPU PRAPANCHA**

ಕರ್ನಾಟಕ ಗಾಂಧಿ ಸ್ಮಾರಕ ನಿಧಿ


# ಬಾಪು ಪ್ರಪಂಚ


ಕನ್ನಡ–ಇಂಗ್ಲೀಷ್ ಮಾಸಿಕ ಸಂಪುಟ–05 • ಸಂಚಿಕೆ–08 • ಜನವರಿ 2024




**ಬಲಿಷ್ಠತೆ ಎನ್ನುವುದು ನಿಮ್ಮ ದೈಹಿಕ ಸಾಮರ್ಥ್ಯದಿಂದ ಬರುವಂಥದಲ್ಲ; ಅದು ಅದಮ್ಯ ಅಂತಃಶಕ್ತಿಯಿಂದ ಬರುವಂಥದ್ದು.**

- ಗಾಂಧಿ




ಮಾನ್ಯರೆ ,

ಬಾಪೂ ಪ್ರಪಂಚ ಪತ್ರಿಕೆಯನ್ನು ಯುವಸಮುದಾಯಕ್ಕಾಗಿ ಡಿಜಿಟಲ್ ಮಾಧ್ಯಮದಲ್ಲಿ ಹೊರತನ್ನಿರಿ. ಹಳೆಯ ತಲೆಮಾರಿನವರಿಗಾಗಿ ಕೆಲ ಕಾಲ ಮುದ್ರಣ ಮಾಧ್ಯಮದಲ್ಲೂ ಮುಂದುವರಿಸಿಬಹುದು. ಗಾಂಧೀಜಿ ಚಿಂತನೆಗಳನ್ನು ಇಂದಿನ ದಿನಮಾನಗಳಿಗೆ ಹೇಗೆ ಅಳವಡಿಸಬಹುದು ಎನ್ನುವ ವಿಷಯಗಳಿಗೆ ಹೆಚ್ಚು ಒತ್ತು ನೀಡುವ ಲೇಖನಗಳು ಬಾಪೂ ಪ್ರಪಂಚದಲ್ಲಿ ಹೆಚ್ಚು ಪ್ರಕಟಗೊಳ್ಳಲಿ .ಜಗತ್ತಿನಾದ್ಯಂತ ಗಾಂಧಿ ಹೇಗೆ ಪ್ರಭಾವ ಬೀರಿದ್ದಾರೆ ಎನ್ನುವ ಮಾಹಿತಿಯುಕ್ತ ಲೇಖನಗಳನ್ನು ಪ್ರಕಟಿಸಿದರೆ ಓದುಗರಿಗೆ ಗಾಂಧೀಜಿಯ ಮಹತ್ವ ಅರಿವಾಗುತ್ತದೆ. ಯುವ ಸಮುದಾಯಕ್ಕೆ ಗಾಂಧೀಜಿಯನ್ನು ಪರಿಚಯಿಸುವ ಮುಖ್ಯ ಕಾರ್ಯಕ್ರಮಗಳನ್ನು ಗಾಂಧಿ ಸ್ಮಾರಕ ನಿಧಿ ಹಮ್ಮಿಕೊಳ್ಳುವುದು ತುರ್ತು ಅಗತ್ಯವಾಗಿದೆ. ಶಾಲಾ ಪಠ್ಯಗಳಲ್ಲಿ ಗಾಂಧಿ ಪರಿಚಯ ಪಾಠಗಳನ್ನು ಅಳವಡಿಸಲು ಸರ್ಕಾರದ ಮೇಲೆ ಗಾಂಧಿ ಸ್ಮಾರಕ ನಿಧಿಯವರು ಒತ್ತಡ ಹೇರಬೇಕು .

**– ಮಹಾಂತೇಶ್**
ಗಾಂಧಿ ಬಳಗ, ಬೆಂಗಳೂರು

* * *

ಮಾನ್ಯರೆ,

ಮಹಾತ್ಮ ಗಾಂಧೀಜಿಯವರು 1948 ರ ಜನವರಿ 30 ರಂದು ಹತ್ಯೆಯಾಗಿ ಹುತಾತ್ಮರಾದ ನಂತರ ಅವರ ಚಿಂತನೆ ಮತ್ತು ವಿಚಾರಗಳನ್ನು ಮುಂದಿನ ಪೀಳಿಗೆಗೆ ತಲುಪಿಸಲು ಗಾಂಧಿ ಸ್ಮಾರಕ ನಿಧಿಯನ್ನು ಆರಂಭಿಸಿ 75 ವರ್ಷಗಳಾಗಿದೆ. ಇದನ್ನು ಅರ್ಥಪೂರ್ಣವಾಗಿ ಆಚರಿಸಲು ಗಾಂಧಿ ಪ್ರಣೀತ ಸಂಘ ಸಂಸ್ಥೆಗಳು ಒಗ್ಗೂಡಿ ಕೆಲಸ ಮಾಡ ಬೇಕು. ಈ ನಿಟ್ಟಿನಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ದೇಶಕ್ಕೇ ಮಾದರಿಯಾಗುವಂತೆ ಕಾರ್ಯಕ್ರಮಗಳನ್ನು ರೂಪಿಸಲಿ. ಈ ಸಂಬಂಧ ಬಾಪೂ ಪ್ರಪಂಚ ಪತ್ರಿಕೆಯಲ್ಲಿ ಸರಣಿ ಲೇಖನಗಳನ್ನು ಪ್ರಕಟಿಸಲಿ ಎನ್ನುವುದು ನಮ್ಮ ಆಗ್ರಹ.

**– ಮುರಳೀಧರ್**
ಶಿಕ್ಷಣ ತಜ್ಞರು, ಬೆಂಗಳೂರು

* * *

ಮಾನ್ಯರೆ,

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾಗಿ 25 ವರ್ಷಕ್ಕೂ ಹೆಚ್ಚು ಕಾಲ ಕಾರ್ಯ ನಿರ್ವಹಿಸಿ ಇದನ್ನು ದೇಶದಲ್ಲಿಯೇ ಒಂದು ಮಾದರಿ ಸಂಸ್ಥೆಯನ್ನಾಗಿ ರೂಪಿಸಿದ ಹೆಗ್ಗಳಿಕೆ ದಿವಂಗತ ಹೋ ಶ್ರೀನಿವಾಸಯ್ಯ ನವರಿಗೆ ಸಲ್ಲುತ್ತದೆ. ಇವರ ಪರಿಚಯ ಲೇಖನವನ್ನು ಬಾಪೂ ಪ್ರಪಂಚ ಪತ್ರಿಕೆಯಲ್ಲಿ ಪ್ರಕಟಿಸಿ ಮುಂದಿನ ಪೀಳಿಗೆಗೆ ಅವರ ಕಾರ್ಯ ನಿಷ್ಠೆಯನ್ನು ತಲುಪಿಸಬೇಕು ಎಂದು ನಾವು ಆಶಿಸುತ್ತೇವೆ. ಬೆಂಗಳೂರು ನಗರದ ಮಲ್ಲೇಶ್ವರಂನಲ್ಲಿ ಬೆಂಗಳೂರು ಶಿಕ್ಷಣ ಸೊಸೈಟಿ ಸ್ಥಾಪಿಸಿ ಮಧ್ಯಮ ಹಾಗೂ ಬಡ ಜನರ ಮಕ್ಕಳಿಗೆ ಕಡಿಮೆ ವೆಚ್ಚದಲ್ಲಿ ಶಿಕ್ಷಣ ವ್ಯವಸ್ಥೆ ಕಲ್ಪಿಸಿದ ಅವರ ಸೇವೆ ಅನುಪಮ. ಮುಂದಿನ ವರ್ಷ ಅವರ ಜನ್ಮ ದಿನ ಆಗಮಿಸುತ್ತಿದೆ. ಇದನ್ನು ಅರ್ಥಪೂರ್ಣವಾಗಿ ಆಚರಿಸಲು ಗಾಂಧಿ ಸ್ಮಾರಕ ನಿಧಿ ಮುಂಚೂಣಿಯಲ್ಲಿ ನಿಂತು ಕಾರ್ಯಕ್ರಮಗಳನ್ನು ರೂಪಿಸಲು ಮಾರ್ಗದರ್ಶನ ನೀಡಬೇಕು.

**ಶಿಕ್ಷಕರು ಮತ್ತು ಸಿಬ್ಬಂದಿ**
ಬೆಂಗಳೂರು ಎಜುಕೇಷನ್ ಸೊಸೈಟಿ, ಮಲ್ಲೇಶ್ವರ




ಪ್ರಿಯರೆ,

ಬಾಪೂ ಪ್ರಪಂಚ ಸಂಚಿಕೆಯ ಬಗ್ಗೆ ಓದುಗರು ವ್ಯಕ್ತಪಡಿಸುತ್ತಿರುವ ಸದಭಿಪ್ರಾಯಗಳಿಗೆ ಗಾಂಧಿ ಸ್ಮಾರಕ ನಿಧಿ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ನಿಮ್ಮ ಅಪೇಕ್ಷೆಯಂತೆ ಬಾಪೂ ಪ್ರಪಂಚ ಪತ್ರಿಕೆಯನ್ನು ಹೆಚ್ಚು ಜನರಿಗೆ ತಲುಪಿಸಲು ಪ್ರಯತ್ನಿಸುತ್ತೇವೆ.

**ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಪ್ರಕಟಣೆಗಳು ಮತ್ತು ಬಾಪೂ ಪ್ರಪಂಚದ ಇತ್ತೀಚಿನ ಸಂಚಿಕೆಗಳನ್ನು**
**https://gandhibhavan.in**
**ಜಾಲತಾಣದಲ್ಲಿ ವೀಕ್ಷಿಸಿ.**



ಚಂದಾ ಕಳುಹಿಸುವ ಮತ್ತು ಪತ್ರಿಕೆಯ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸುವ ವಿಳಾಸ :

**ಸಂಪಾದಕರು, ಬಾಪು ಪ್ರಪಂಚ**
ಗಾಂಧಿ ಭವನ
ಕುಮಾರ ಪಾರ್ಕ್ ಪೂರ್ವ,
ಬೆಂಗಳೂರು –560001
gandhibhavanabengaluru@gmail.com



**ಬಾಪು ಪ್ರಪಂಚ ಪತ್ರಿಕೆಯ ವಾರ್ಷಿಕ ಚಂದಾ ಹಣ 250 ರೂಗಳನ್ನು ಈ ಕೆಳಗಿನ ಕ್ಯೂಆರ್ ಕೋಡ್ ಮೂಲಕ ಪಾವತಿಸಿ, ನಿಮ್ಮ ಅಂಚೆ ವಿಳಾಸವನ್ನು ಗಾಂಧಿ ಭವನದ ಮೇಲಿನ ವಿಳಾಸಕ್ಕೆ ಹಣ ಪಾವತಿ ವಿವರಗಳ ಜೊತೆ ಕಳುಹಿಸಿ.**



# ಮಹಾತ್ಮ ಹುತಾತ್ಮನಾದನಂದು..

– ರವಿಕೃಷ್ಣಾರೆಡ್ಡಿ

" The Life of Mahatma Gandhi" ಪುಸ್ತಕ ಬರೆದ ಲೂಯಿ ಫಿಷರ್, ಪಾಶ್ಚಾತ್ಯ ಲೇಖಕ. "ಮಹಾತ್ಮ ಗಾಂಧಿ ಎಂದಷ್ಟೆ ಕರೆಸಿಕೊಳ್ಳುತ್ತಿದ್ದ ಆತ ಜನವರಿ 30, 1948ರ ಶುಕ್ರವಾರದ ದಿನ ಹತ್ಯೆಯಾದಾಗ ಶ್ರೀಮಂತಿಕೆ, ಆಸ್ತಿ, ಪದವಿ, ಅಧಿಕಾರದ ಹುದ್ದೆ, ಪಾಂಡಿತ್ಯದ ಹೆಚ್ಚುಗಾರಿಕೆ, ವೈಜ್ಞಾನಿಕ ಸಾಧನೆ, ಅಥವಾ ಯಾವುದೇ ಕಲೆಯ ವರ ಇಲ್ಲದಿದ್ದ ಒಬ್ಬ ಖಾಸಗಿ ಪ್ರಜೆ. ಆದರೂ, ಸರ್ಕಾರ ಮತ್ತು ಸೇನಾಪಡೆ ಎಪ್ಪತ್ತೆಂಟು ವರ್ಷದ, ಲಂಗೋಟಿಯಲ್ಲಿದ್ದ ಕಂದು ಬಣ್ಣದ ಚಿಕ್ಕ ಮನುಷ್ಯನಿಗೆ ಅಪರೂಪದ ಗೌರವ ಸಲ್ಲಿಸಿದರು. ಭಾರತ ಸರ್ಕಾರಕ್ಕೆ 3441 ಪತ್ರಗಳು ಬಂದವು. ಎಲ್ಲವೂ ಸ್ವಯಂಪ್ರೇರಿತವಾಗಿ, ಸಹಾನುಭೂತಿ ವ್ಯಕ್ತಪಡಿಸಿ, ವಿದೇಶಗಳಿಂದ ಬಂದವು. ನೀತಿವಂತ ಗಾಂಧಿಯ ಜೀವನವನ್ನು ಹಂತಕನ ಗುಂಡುಗಳು ಅಂತ್ಯಗೊಳಿಸಿದಾಗ ಅಷ್ಟೇನೂ ನೈತಿಕ ಶ್ರೀಮಂತಿಕೆಯಿಂದ ಕೂಡಿರದ ನಾಗರಿಕತೆ ಮತ್ತಷ್ಟು ಬಡವಾಯಿತು" ಎಂದು ಬಣ್ಣಿಸಿದ್ದಾರೆ.

"ಮಹಾತ್ಮ ಗಾಂಧಿ ಇಡೀ ಮನುಕುಲದ ಮನಸಾಕ್ಷಿಯ ವಕ್ತಾರರಾಗಿದ್ದರು," ಎಂದರು ಅಮೇರಿಕಾ ದೇಶದ ವಿದೇಶಾಂಗ ಮಂತ್ರಿ ಜನರಲ್ ಜಾರ್ಜ್ ಮಾರ್ಷಲ್.

ಪೋಪ್ ಪಿಯುಸ್, ಟಿಬೆಟ್ಟಿನ ಧರ್ಮಗುರು ದಲೈಲಾಮ, ಕ್ಯಾಂಟರ್ಬರಿಯ ಆರ್ಚ್ ಬಿಷಪ್, ಇಂಗ್ಲೆಂಡಿನ ರಾಜ, ರಾಷ್ಟ್ರಪತಿ ಟ್ರೂಮನ್, ಚಿಯಾಂಗ್ ಕೈ–ಷೆಕ್, ಫ್ರಾನ್ಸ್ ದೇಶದ ರಾಷ್ಟ್ರಪತಿ , ಹಾಗೂ ಪ್ರಪಂಚದ ಎಲ್ಲಾ ಅತಿ ಮುಖ್ಯ ರಾಷ್ಟ್ರಗಳ (ಸೋವಿಯತ್ ರಷ್ಯ ಬಿಟ್ಟು) ಮತ್ತು ಬಹುಪಾಲು ಸಣ್ಣ ರಾಷ್ಟ್ರಗಳ ಮುಖ್ಯಸ್ಥರು ಗಾಂಧಿಯ ಅಂತ್ಯಕ್ಕೆ ಸಾರ್ವಜನಿಕವಾಗಿ ದುಃಖ ವ್ಯಕ್ತಪಡಿಸಿದರು.

ಫ್ರೆಂಚ್ ಸಮಾಜವಾದಿ ಲ್ಯೋನ್ ಬ್ಲಮ್ ಲಕ್ಷಾಂತರ ಜನರಿಗೆ ಅನ್ನಿಸಿದ್ದನ್ನು ಕಾಗದದ ಮೇಲೆ ಬರೆದಿಳಿಸಿದ. "ನಾನು ಗಾಂಧಿಯನ್ನು ಎಂದೂ ನೋಡಲಿಲ್ಲ. ನನಗೆ ಆತನ ಭಾಷೆ ತಿಳಿದಿಲ್ಲ. ಆತನ ದೇಶದಲ್ಲಿ ಎಂದೂ ಕಾಲಿಡಲಿಲ್ಲ. ಆದರೂ, ತುಂಬ ಹತ್ತಿರದವರನ್ನು ಕಳೆದುಕೊಂಡರೆ ಆಗುವಷ್ಟು ದುಃಖ ಆಗುತ್ತಿದೆ. ಈ

ಅಸಾಧಾರಣ ಮನುಷ್ಯನ ಸಾವಿನಿಂದಾಗಿ ಇಡೀ ಪ್ರಪಂಚವೇ ಶೋಕಾಚರಣೆಯಲ್ಲಿ ಮುಳುಗಿದೆ."

ಪ್ರೊಫೆಸರ್ ಆಲ್ಬರ್ಟ್ ಐನ್‌ಸ್ಟೀನ್ ದೃಢವಾಗಿ ಹೇಳಿದ್ದು : "ಒಂದು ಶಕ್ತಿಶಾಲಿ ಜನಬೆಂಬಲವನ್ನು ಕೇವಲ ವಾಡಿಕೆಯ ರಾಜಕೀಯ ತಂತ್ರ ಮತ್ತು ಕುತಂತ್ರಗಳಿಂದ ಮಾತ್ರವಲ್ಲದೆ ಜೀವನದ ಅತ್ಯುತ್ತಮ ನೈತಿಕ ಮಟ್ಟದ ನಡವಳಿಕೆಯಿಂದಲೂ ಕಟ್ಟಬಹುದು ಎಂದು ಖಚಿತ ಉದಾಹರಣೆಯ ಮುಖಾಂತರ ಗಾಂಧಿ ತೋರಿಸಿಕೊಟ್ಟರು."

ವಿಶ್ವಸಂಸ್ಥೆಯ ಭದ್ರತಾ ಮಂಡಳಿಯು ಗಾಂಧೀಜಿಯವರಿಗೆ ಗೌರವ ಸೂಚಿಸಲಿಕ್ಕಾಗಿ ಕಲಾಪವನ್ನು ಕೆಲಕಾಲ ಸ್ಥಗಿತಗೊಳಿಸಿತು. ಭದ್ರತಾ ಮಂಡಳಿಯ ಬ್ರಿಟಿಷ್ ಪ್ರತಿನಿಧಿ ಫಿಲಿಪ್ ನೋಯೆಲ್ಬೆಕರ್ ಗಾಂಧಿಯನ್ನು "ಕಡುಬಡವನ, ಏಕಾಂಗಿಯ ಮತ್ತು ಸೋತವನ ಸ್ನೇಹಿತ," ಎಂದು ವರ್ಣಿಸಿ "ಗಾಂಧಿಯ ಮಹತ್ಸಾಧನೆಗಳು ಇನ್ನು ಮುಂದೆಯೂ ಬರಲಿವೆ." ಎಂದು ಪ್ರತಿಪಾದಿಸಿದರು .

ಭದ್ರತಾ ಮಂಡಳಿಯ ಅನ್ಯ ಸದಸ್ಯರು ಗಾಂಧಿಯ ಆಧ್ಯಾತ್ಮಿಕ ಗುಣಗಳನ್ನು ಶ್ಲಾಘಿಸಿ ಶಾಂತಿ ಮತ್ತು ಅಹಿಂಸೆಯೆಡೆಗೆ ಗಾಂಧೀಜಿಯ ನಿಷ್ಠೆಯನ್ನು ಪ್ರಶಂಸಿಸಿದರು. ಸೋವಿಯತ್ ಒಕ್ಕೂಟದ ಆಂಡ್ರ್ಯಿ ಗ್ರಾಮಿಕೊ ಗಾಂಧಿಯನ್ನು ಭಾರತದ ಉನ್ನತ ರಾಜಕೀಯ ನಾಯಕರಲ್ಲಿ ಒಬ್ಬರೆಂದು ವರ್ಣಿಸಿ ಆತನ ಹೆಸರು ಸುದೀರ್ಘ ಸಮಯ ತೆಗೆದುಕೊಂಡ ಭಾರತದ ಜನರ ರಾಷ್ಟ್ರೀಯ ವಿಮೋಚನಾ ಹೋರಾಟದ ಜೊತೆಗೆ ಎಂದಿಗೂ ಜೋಡಿಸಲ್ಪಡುತ್ತದೆ ಎಂದರು. ಸೋವಿಯತ್ ಉಕ್ರೇನ್ನ ಪ್ರತಿನಿಧಿ ಟಾರಾಸೆಂಕೊ ಸಹ ಗಾಂಧಿಯ ರಾಜಕಾರಣವನ್ನು ಒತ್ತುಕೊಟ್ಟು ಹೇಳಿದರು.

ಗಾಂಧಿಯ ಸಾವಿಗೆ ಜಗತ್ತಿನಾದ್ಯಂತ ವ್ಯಕ್ತವಾದ ಪ್ರತಿಕ್ರಿಯೆಯೇ ಒಂದು ಮುಖ್ಯ ನೈಜಸಾಕ್ಷಿ; ಅದು ವ್ಯಾಪಕವಾಗಿ ಜನರಲ್ಲಿ ಅವರ ಬಗ್ಗೆ ಹರಡಿದ್ದ ಗೌರವ ಮನೋಭಾವ ಮತ್ತು ಅಗತ್ಯವನ್ನು ಅಭಿವ್ಯಕ್ತಗೊಳಿಸಿತು.

ನ್ಯೂಯಾರ್ಕ್ ಪತ್ರಿಕೆಯ ಆಲ್ಬರ್ಟ್ ಡ್ಯೂಶ್ಚ್, "ಗಾಂಧಿಯ ಸಾವಿಗೆ ಪೂಜ್ಯಭಾವನೆಯಿಂದ ಪ್ರತಿಸ್ಪಂದಿಸಿದ ಜಗತ್ತಿಗೆ ಇನ್ನೂ ಸ್ವಲ್ಪ ಭರವಸೆಯಿದೆ." ಎಂದು ಘೋಷಿಸಿ– "–ನವದೆಹಲಿಯ ದುರಂತವನ್ನು ಹಿಂಬಾಲಿಸಿದ ಆಘಾತ ಮತ್ತು ಪರಿತಾಪವನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗದಿದ್ದರೂ ಅದನ್ನು ಗೌರವಿಸುತ್ತೇವೆ ಎಂಬುದನ್ನು ತೋರಿಸಿಕೊಟ್ಟಿತು." ಎಂದರು.

ಅಮೇರಿಕಾದ ಸೆನೆಟರ್ ಆರ್ಥರ್ ವ್ಯಾಂಡೆನ್ಬರ್ಗ್ ಹೇಳಿದ್ದು : "ವಿನಯಶೀಲತೆ ಮತ್ತು ಸರಳ ಸತ್ಯಗಳನ್ನು ಗಾಂಧಿ ಸಾಮ್ರಾಜ್ಯಗಳಿಗಿಂತ ಶಕ್ತಿಶಾಲಿಯನ್ನಾಗಿ ಮಾಡಿದರು."

ಕಾದಂಬರಿಗಾರ್ತಿ ಪರ್ಲ್ ಬಕ್ ಗಾಂಧಿಯ ಹತ್ಯೆಯನ್ನು "ಮತ್ತೊಂದು ಶಿಲುಬೆಗೇರಿಕೆ" ಎಂದು ವರ್ಣಿಸಿದರು.

ನ್ಯಾಯಾಧೀಶ ಫೆಲಿಕ್ಸ್ ಫ್ರಾಂಕ್‌ಫರ್ಟರ್ ಅದನ್ನು "ಪ್ರಪಂಚದ ಸತ್ಯ ಪಡೆಗಳ ವಿರುದ್ಧದ ಅತಿ ಕ್ರೂರ ಹೊಡೆತ " ಎಂದರು.

ಗಾಂಧಿಯನ್ನು ಪ್ರಶಂಸಿಸುತ್ತಿದ್ದ ಆಡಳಿತಗಾರ ಮತ್ತು ರಾಜಕಾರಣಿಗಳಿಗೆ ತಮ್ಮ ಸ್ವಂತವೇ ನ್ಯೂನತೆಗಳನ್ನು ಕನಿಷ್ಠ ನೆನಪಿಸುವಷ್ಟಾದರೂ ಆಗಿದ್ದರಾತ.

ಕ್ಯಾಲಿಫೋರ್ನಿಯಾದ ಹದಿಮೂರು ವರ್ಷದ ಹುಡುಗಿ ಒಂದು ಕಾಗದದಲ್ಲಿ ಬರೆದಳು:

"ಗಾಂಧಿಯ ಸಾವನ್ನು ಕೇಳಿ ನನಗೆ ನಿಜವಾಗಿಯೂ ದಾರುಣ ದುಃಖವಾಯಿತು. ಆತನ ಬಗ್ಗೆ ನನಗೆ ಅಷ್ಟೊಂದು ಆಸಕ್ತಿಯಿದೆ ಎಂದು ಎಂದೂ ಅಂದುಕೊಂಡಿರಲಿಲ್ಲ. ಆದರೆ ಆ ಮಹಾನ್ ವ್ಯಕ್ತಿಯ ಸಾವಿನಿಂದ ನನಗೆ ಎಷ್ಟು ಅಸಂತೋಷವಾಗಿದೆ ಎಂದು ಈಗ ತಿಳಿಯಿತು."

ನ್ಯೂಯಾರ್ಕಿನಲ್ಲಿ, ಹನ್ನೆರಡು ವರ್ಷದ ಹುಡುಗಿ ಅಡಿಗೆ ಮನೆಗೆ ಉಪಹಾರ ಸ್ವೀಕರಿಸಲು ಹೋಗಿದ್ದಳು. ಚಾಲನೆಯಲ್ಲಿದ್ದ ರೇಡಿಯೊ ಗಾಂಧಿಗೆ ಗುಂಡಿಟ್ಟ ಸುದ್ದಿ ತಂದಿತು. ಅದೇ ಕ್ಷಣದಲ್ಲಿ, ಆ ಚಿಕ್ಕ ಹುಡುಗಿ, ಮನೆಕೆಲಸದವಳು, ಮತ್ತು ತೋಟದ ಮಾಲಿ ಪ್ರಾರ್ಥನಾ ಸಭೆ ನಡೆಸಿದರು, ಪ್ರಾರ್ಥಿಸಿದರು ಮತ್ತು





**ವಿಶ್ವಸಂಸ್ಥೆ ತನ್ನ ಧ್ವಜವನ್ನು ಅರ್ಧ ಕೆಳಗಿಳಿಸಿತು. ಮಾನವತೆ ತನ್ನ ಧ್ವಜವನ್ನು ಪೂರ್ತಿ ಇಳಿಸಿತು.**

(ಮಹಾತ್ಮ ಗಾಂಧೀಜಿ ಹತ್ಯೆಯಾಗಿ ನಿಧನರಾದ ಸಂದರ್ಭದಲ್ಲಿ ವಿಶ್ವ ಸಂಸ್ಥೆಯ ಎಲ್ಲ ರಾಷ್ಟ್ರಗಳ ಧ್ವಜಗಳನ್ನು ಅರ್ಧ ಮಟ್ಟಕ್ಕೆ ಇಳಿಸಿ ಗೌರವ ಸಲ್ಲಿಸಿತು . ಈ ಲಿಂಕ್ ತೆರೆದು ವಿಶ್ವ ಸಂಸ್ಥೆಯ ಧ್ವಜ ಕೆಳಗಿಳಿಯುತ್ತಿರುವ ಕಿರು ದೃಶ್ಯವನ್ನು ವೀಕ್ಷಿಸಬಹುದು )

https://www.pond5.com/stock-footage/item/74936478-flag-united-nations-half-mast-honoring-mahatma-gandhi





ಅತ್ತರು. ಅದೇ ರೀತಿ, ಪ್ರಪಂಚದಾದ್ಯಂತ ಲಕ್ಷಾಂತರ ಜನ ಗಾಂಧಿಯ ಸಾವನ್ನು ವೈಯುಕ್ತಿಕ ನಷ್ಟವೆಂಬಂತೆ ಶೋಕಿಸಿದರು. ಅವರಿಗೆ ಇದೆಲ್ಲಾ ಯಾಕೆಂದು ಅಷ್ಟೇನೂ ಸರಿಯಾಗಿ ತಿಳಿದಿರಲಿಲ್ಲ; ಆತ ಏನನ್ನು ಪ್ರತಿನಿಧಿಸಿದ್ದ ಎಂದೂ ಸಹ ಚೆನ್ನಾಗಿ ಗೊತ್ತಿರಲಿಲ್ಲ. ಆದರೆ ಆತ "ಒಳ್ಳೆಯ ಮನುಷ್ಯ"ನಾಗಿದ್ದ ಮತ್ತು ಒಳ್ಳೆಯವರು ವಿರಳ.

ಸರ್ ಸ್ಟಾಫರ್ಡ್ ಕ್ರಿಪ್ಸ್ ಬರೆಯುತ್ತಾರೆ, "ಲೌಕಿಕ ವಸ್ತುಗಳ ಮೇಲೆ ಶಕ್ತಿಯುತ ಚೈತನ್ಯವನ್ನು ಇಷ್ಟು ಬಲಯುತವಾಗಿ ಮತ್ತು ಸಮಂಜಸವಾಗಿ ಯಾವುದೇ ಸಮಯದಲ್ಲಾಗಲಿ ಅಥವ ಕನಿಷ್ಠ ಇತ್ತೀಚಿನ ಇತಿಹಾಸದಲ್ಲಾಗಲಿ ಪ್ರದರ್ಶಿಸಿದ ಮತ್ತೊಬ್ಬ ವ್ಯಕ್ತಿ ನನಗೆ ತಿಳಿದಿಲ್ಲ." ಇದನ್ನೇ ತಾವು ಶೋಕಿಸುತ್ತಿದ್ದಾಗ ಜನ ಗ್ರಹಿಸಿದ್ದು. ಅವರ ಸುತ್ತಮುತ್ತೆಲ್ಲ ಲೌಕಿಕ ವಸ್ತುಗಳು ಅಲೌಕಿಕ ಚೈತನ್ಯಕ್ಕಿಂತ ಬಲವಾಗಿದ್ದವು. ಆತನ ಮಿಂಚಿನಂತಹ ದಿಢೀರ್ ಸಾವು ವಿಶಾಲ ಕತ್ತಲನ್ನು ಅನಾವರಣಗೊಳಿಸಿತು. ಆತನ ನಂತರ ಜೀವಿಸಿದ ಯಾರೂ ಸತ್ಯವಂತ ಜೀವನವನ್ನು ಜೀವಿಸುವುದಕ್ಕಾಗಿ, ಕಕ್ಕುಲತೆ, ಸ್ವವ್ಯಕ್ತಿನಾಶ, ವಿನಯಶೀಲತೆ, ಸೇವೆ ಮತ್ತು ಅಹಿಂಸೆಯನ್ನು ಸುದೀರ್ಘ ಕಾಲ, ಪ್ರಬಲ ಶತ್ರುಗಳ ವಿರುದ್ಧದ ಕಷ್ಟಮಯ ಹೋರಾಟವನ್ನು, ಆತನಷ್ಟು ಕಠಿಣವಾಗಿ ಪ್ರಯತ್ನಿಸಲಿಲ್ಲ ಮತ್ತು ಅಷ್ಟು ಯಶಸ್ಸು ಪಡೆಯಲಿಲ್ಲ. ತನ್ನ ದೇಶದಲ್ಲಿನ ಬ್ರಿಟಿಷ್ ಆಡಳಿತದ ವಿರುದ್ಧ ಮತ್ತು ತನ್ನ ದೇಶದ್ದೇ ಜನರ ದುಷ್ಟತೆಯ ವಿರುದ್ಧ ಆತ ತೀವ್ರವಾಗಿ ಮತ್ತು ನಿರಂತರವಾಗಿ ಹೋರಾಡಿದ. ಆದರೆ ಯುದ್ಧದ ಮಧ್ಯದಲ್ಲಿ ತನ್ನ ಕೈಗಳನ್ನು ಪವಿತ್ರವಾಗಿಟ್ಟುಕೊಂಡ. ಮತ್ಸರವಿಲ್ಲದೆ, ಢೋಂಗಿತನವಿಲ್ಲದೆ, ಅಥವ ದ್ವೇಷವಿಲ್ಲದೆ ಹೋರಾಡಿದ.

ಈ ಮೇಲಿನ ಸಾಲುಗಳು 1950 ರಲ್ಲಿ ಪ್ರಕಟವಾದ, ಲೂಯಿ ಫಿಷರ್ ಎಂಬ ಪಾಶ್ಚಾತ್ಯ ಲೇಖಕ ಬರೆದ "The Life of Mahatma Gandhi" ಪುಸ್ತಕದ ಒಂದೆರಡು ಪುಟಗಳಲ್ಲಿ ಬರುವ ವಾಕ್ಯಗಳು. ಈ ಪುಸ್ತಕವನ್ನು ಆತ ಇಂಗ್ಲೀಷ್ ಬಲ್ಲ ಅಮೇರಿಕನ್ ಹಾಗೂ ಪಾಶ್ಚಾತ್ಯ ಓದುಗರನ್ನು ಗಮದಲ್ಲಿಟ್ಟುಕೊಂಡು ಬರೆದದ್ದು . ಆದ್ದರಿಂದ ಅಮೇರಿಕನ್ನರಿಗೆ ಅಥವ ಪಾಶ್ಚಾತ್ಯರಿಗೆ ಪ್ರಸ್ತುತ ಮತ್ತು ಪರಿಚಿತವಿರುವ, ಅವರಿಗೆ ಮುಖ್ಯವೆನಿಸುವ ವ್ಯಕ್ತಿ–ವಿಷಯಗಳನ್ನು ತೆಗೆದುಕೊಂಡು ಆ ದೃಷ್ಟಿಕೋನದಲ್ಲಿ ನಿರೂಪಿಸಿರುವುದು.

ಶರಣರ ಗುಣವನ್ನು ಮರಣದಲ್ಲಿ ನೋಡೆಂಬಂತೆ, ಮೋಹನದಾಸ ಗಾಂಧಿ ಸತ್ತಾಗ ಜಗತ್ತು ಪ್ರತಿಕ್ರಿಯಿಸಿದ ರೀತಿ ಅನನ್ಯ. ಆದರೆ ಇಲ್ಲಿ ಆ ಅನನ್ಯತೆಗೆ ಕೇವಲ ಒಳ್ಳೆಯವರು ವಿರಳ ಎಂಬುದಷ್ಟೇ ಕಾರಣವಲ್ಲ ಎನ್ನುವುದು ಸ್ವಲ್ಪ ಆಲೋಚಿಸಿದರೆ ಎಲ್ಲರಿಗೂ ತಿಳಿಯುವ ಸರಳ ಸತ್ಯ.

ಗಾಂಧಿ ಹತ್ಯೆಯಾದ ದಿನವನ್ನು ಹುತಾತ್ಮರ ದಿನಾಚರಣೆಯನ್ನಾಗಿಸಿ ಕೈತೊಳೆದುಕೊಳ್ಳುವುದಕ್ಕಿಂತ ಸಮಕಾಲೀನ ಅಗತ್ಯಗಳಿಗೆ ತಕ್ಕಂತೆ ಗಾಂಧೀವಾದವನ್ನು ಸಾಣೆ ಹಿಡಿದುಕೊಂಡರೆ ಎಷ್ಟೋ ಸಮಸ್ಯೆಗಳಿಗೆ ನೀತಿಯುಕ್ತ, ಸತ್ಯ ಉತ್ತರ ಸಿಗುತ್ತದೆ.

(2004 ಜನವರಿ 30 ರಂದು ದಟ್ಸ್ ಕನ್ನಡದಲ್ಲಿ ಮತ್ತು ನನ್ನ "ಜಿಜ್ಞಾಸಾ ಗಂಗೆಯ ದಡದ ಕಾಲ್ದಾರಿಯಲ್ಲಿ" ಪುಸ್ತಕದಲ್ಲಿ ಪ್ರಕಟಿತವಾಗಿದೆ.)

■



# ದಿ ಕ್ಲೋಸ್ ಎನ್ ಕೌಂಟರ್ಸ್..

ಪರಕೀಯರ ಆಡಳಿತದ ದಾಸ್ಯದಿಂದ ಭಾರತವನ್ನು ಮುಕ್ತಗೊಳಿಸಲು ಕಟಿಬದ್ಧರಾಗಿದ್ದ ಗಾಂಧೀಜಿಯವರು ಉಪವಾಸ ಸತ್ಯಾಗ್ರಹ, ಮದ್ಯಪಾನ ನಿಷೇಧ, ಅಸ್ಪೃಶ್ಯತಾ ನಿವಾರಣೆ ಮುಂತಾದ ವಿಷಯಗಳನ್ನು ಕೂಡ ತನ್ನ ಚಳವಳಿಯ ಭಾಗವನ್ನಾಗಿಸಿಕೊಂಡಿದ್ದರು.

ಕಳೆದ ಶತಮಾನದ ಮೂವತ್ತರ ದಶಕದ ಮಧ್ಯ ಭಾಗದಲ್ಲಿ ಗಾಂಧೀಜಿಯವರು ಈ ಪ್ರಯುಕ್ತ ಕರಾವಳಿ ಜಿಲ್ಲೆಗೂ ಒಮ್ಮೆ ಭೇಟಿ ನೀಡಿದ್ದರು. ಅವರ ಅಂದಿನ ಭೇಟಿಯ ಪ್ರಸಂಗವನ್ನು ಹಿರಿಯ ಪತ್ರಕರ್ತ ಹಾಗೂ ಪ್ರಸಾರ ಭಾರತಿಯ ಮಾಜಿ ಅಧ್ಯಕ್ಷ ಎಂ. ವಿ. ಕಾಮತ್ ದಾಖಲಿಸಿದ್ದಾರೆ.

ಮಹಾತ್ಮ ಗಾಂಧೀಜಿಯವರ ಉಡುಪಿ ಭೇಟಿಯ ಹೊಣೆಯನ್ನು ಎಂ. ವಿ. ಕಾಮತ್ ಅವರ ತಂದೆ ವಿಠಲ ಕಾಮತ್ ವಹಿಸಿದ್ದರು. ಆಗಿನ್ನೂ ಶಾಲಾ ವಿದ್ಯಾರ್ಥಿಯಾಗಿದ್ದ ಎಂ. ವಿ. ಕಾಮತ್ ತಂದೆಯ ಜತೆಗಿದ್ದು ಸಹಕರಿಸಿದ್ದರು. ಸ್ವಾತಂತ್ರ್ಯ ಹೋರಾಟದ ನೇತಾರ ಗಾಂಧೀಜಿಯವರನ್ನು ನೋಡುವುದೇ ತಮ್ಮ ಜೀವನದ ಪರಮ ಭಾಗ್ಯವೆಂದು ತಿಳಿದ ಕರಾವಳಿ ಜಿಲ್ಲೆಯ ಜನತೆ ಗಾಂಧೀಜಿಯವರು ಬರುವ ದಾರಿಯುದ್ದಕ್ಕೂ ಸಾವಿರಗಟ್ಟಲೆ ಕಾದು ನಿಂತಿದ್ದರು. ದಾರಿಯಲ್ಲಿ ಕಾದು ನಿಂತ ಜನರ ವಂದನೆಯನ್ನು ಸ್ವೀಕರಿಸುತ್ತ ಗಾಂಧೀಜಿಯವರು ಉಡುಪಿಗೆ ಬಂದು ತಲುಪಿದ್ದು ನಿಗದಿತ ಸಮಯಕ್ಕಿಂತ ನಾಲ್ಕು ಗಂಟೆ ತಡವಾಗಿ. ದಾರಿಯಲ್ಲಿ ಸಿಗುವ ಮೂರ್ನಾಲ್ಕು ನದಿಗಳನ್ನು ದಾಟಲು ಹಾಗೂ ಗಾಂಧೀಜಿಯವರು ಪಯಣಿಸುತ್ತಿದ್ದ ಕಾರನ್ನು ಜಂಗಲ್ ಮೂಲಕ ಈಚೆ ದಡಕ್ಕೆ ತರಲು ತಗಲಿದ ಸಮಯ ಪಯಣದ ವಿಳಂಬಕ್ಕೆ ಮುಖ್ಯ ಕಾರಣವಾಗಿತ್ತು.

ಜಂಗಲ್ ಮೂಲಕ ಕಾರು ಒಯ್ಯಲು ಅಗತ್ಯವಿದ್ದ ನಾಲ್ಕು ಜನ ಅಂಬಿಗರು ಗಾಂಧೀಜಿಯವರಿಗಾಗಿ ಕಾದು ನಿಂತಿದ್ದರು. ಸಾಮಾನ್ಯವಾಗಿ ದೋಣಿಗೆ ಹುಟ್ಟು ಹಾಕುವ ಅಂಬಿಗರು ಹುರುಪು ಬರಲು ಹೊಟ್ಟೆಗೊಂದಿಷ್ಟು ಸಾರಾಯಿ ಇಳಿಸುತ್ತಾರೆ. ಆದರೆ ಅಂದು ಮಾತ್ರ ಕಾರ್ಯಕ್ರಮ ಸಂಘಟಕರು ಅವರಿಗೆ ಕುಡಿಯದಂತೆ ಮಾಡಿದ ಕಟ್ಟುನಿಟ್ಟನ್ನು ವಿನಮ್ರವಾಗಿ ಪಾಲಿಸಿದ್ದರು. ಅಂಬಿಗರನ್ನು ನೋಡಿದಾಕ್ಷಣ ಗಾಂಧೀಜಿಯವರ ಚತುರಮತಿಗೆ ಏನೋ ಹೊಳೆದಂತಾಯಿತು. ತಕ್ಷಣವೇ ಅವರು ಮದ್ಯಪಾನದ ಕೆಡುಕುಗಳ ಕುರಿತು ಪಾಠ ಮಾಡುವ ಮೇಷ್ಟ್ರಾದರು. ಜೀವಮಾನದಲ್ಲಿ ಮುಂದೆಯೂ ತಾವು ಸಾರಾಯಿ ಕುಡಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಿದರೆ ಮಾತ್ರ ಅವರೆಲ್ಲ ಜಂಗಲಿಗೆ ಹುಟ್ಟು ಹಾಕಬಹುದೆಂದು ಗಾಂಧೀಜಿಯವರು ಹೇಳಿದರು. ಗಾಂಧೀಜಿಯವರನ್ನು ಜಂಗಲ್ನಲ್ಲಿ ದಾಟಿಸುವ ಇಂತಹ ಒಳ್ಳೆಯ ಅವಕಾಶ ಬದುಕಿನಲ್ಲಿ ಮತ್ತೊಮ್ಮೆ ಸಿಕ್ಕೀತೇ ?

ಅಂಬಿಗರು ಹಿಂದೆ ಮುಂದೆ ನೋಡದೆ ಗಾಂಧೀಜಿ ಹೇಳಿದಂತೆ ಆಣೆ ಮಾಡಿದರು. ಬದುಕಿನಲ್ಲಿ ಮುಂದೆಂದೂ ಮದ್ಯ ಸೇವಿಸದೆ ಗಾಂಧೀಜಿಯವರಿಗೆ ಕೊಟ್ಟ ಮಾತನ್ನು ಪಾಲಿಸಿದರು. ಚತುರ ಮಾತಿನ ಬನಿಯಾ ಗಾಂಧೀಜಿಯವರು ಇಲ್ಲಿ ಗೆದ್ದಿದ್ದರು.

ನಿಗದಿತ ಸಮಯಕ್ಕಿಂತ ನಾಲ್ಕು ಗಂಟೆ ತಡವಾಗಿ ಗಾಂಧೀಜಿಯವರು ಉಡುಪಿಗೆ ಬಂದು ತಲುಪಿದಾಗ ಮಧ್ಯಾಹ್ನದ ಉರಿಬಿಸಿಲು. ಗಾಂಧೀಜಿಯವರಿಗಾಗಿ ಬೆಳಗ್ಗಿನಿಂದ ಅಷ್ಟೊತ್ತಿನ ತನಕ ತಾಳ್ಮೆಯಿಂದ

ಕಾದು ನಿಂತಿದ್ದ ಜನ ಗಾಂಧೀಜಿಯವರು ಬರುತ್ತಲೇ ಜೈಕಾರ ಮಾಡಿದರು. ಗಾಂಧೀಜಿಯವರನ್ನು ನೋಡಲು ಅಂದು ಉಡುಪಿ ಸಹಿತ ಆಸುಪಾಸಿನ ಹಳ್ಳಿಗಳಿಂದ ಸಾವಿರ ಸಾವಿರ ಸಂಖ್ಯೆಯಲ್ಲಿ ಜನ ಜಮಾಯಿಸಿದ್ದರು. ಅವರು ಮಾಡಿದ ಜೈಕಾರ ಮುಗಿಲು ಮುಟ್ಟಿತು. ಗಾಂಧೀಜಿಯವರು ಸಭೆಯನ್ನುದ್ದೇಶಿಸಿ ಮಾತನಾಡಿದರು. ಅವರ ಮಾತುಗಳು ನೆರೆದ ಜನರಲ್ಲಿ ಸಂಚಲನ ಮೂಡಿಸಿತು. ನಂತರ ವಿಠಲ ಕಾಮತ್ ಮಾತನಾಡಿ, ನೆರೆದಿದ್ದವರಲ್ಲಿ ಯಾರಾದರೂ ಗಾಂಧೀಜಿಯವರ ಸ್ವಾತಂತ್ರ್ಯ ನಿಧಿಗೆ ಕಾಣಿಕೆ ಅರ್ಪಿಸಬಹುದೆಂದು ಘೋಷಿಸಿದರು. ತಕ್ಷಣ ಜನ ಮುಗಿಬಿದ್ದು ತಾವು ಜೀವಮಾನದಲ್ಲಿ ಮಾಡಿದ ಉಳಿತಾಯದ ಹಣ, ಚೂರುಪಾರು ಬಂಗಾರವನ್ನು ಗಾಂಧೀಜಿಯವರ ಕಾಲ ಬುಡದಲ್ಲಿಟ್ಟು ಕಾಲುಗಳಿಗೆ ನಮಸ್ಕರಿಸಿ ಧನ್ಯತಾ ಭಾವ ಹೊಂದಿದರು.

ಅಷ್ಟರಲ್ಲಿ ಅಲ್ಲಿಗೆ ಬಂದ ಅಚ್ಚ ಬಿಳುಪು ಫ್ರಾಕ್ ತೊಟ್ಟ ಬಾಲೆಯೊಬ್ಬಳು ತನ್ನ ಕೈಗಳಲ್ಲಿ ಧರಿಸಿದ್ದ ಬಂಗಾರದ ಬಳೆಗಳೆರಡನ್ನೂ ತೆಗೆದು ಗಾಂಧೀಜಿಯವರ ಹುಂಡಿಗೆ ಹಾಕಿದಳು. ಆಗ ಆ ಹುಡುಗಿಯತ್ತ ತುಂಟ ನಗೆ ಬೀರಿದ ಗಾಂಧೀಜಿಯವರು ಹೇಳಿದರು :

ಮತ್ತೆ ನಿನ್ನ ಕತ್ತಿನಲ್ಲಿರುವ ಸರ ಮತ್ತು ಕಿವಿಯೋಲೆ ಕೊಡುವುದಿಲ್ಲವೇ ? ಗಾಂಧೀಜಿಯವರ ಮಾತುಗಳಿಂದ ಹುಡುಗಿ ಸ್ವಲ್ಪ ಗಲಿಬಿಲಿಗೊಂಡಂತೆ ಕಂಡರೂ ಯಾವುದೋ ಸಮ್ಮೋಹನಕ್ಕೆ ಒಳಗಾದವಳಂತೆ ಅವರನ್ನೂ ತೆಗೆದು ಹುಂಡಿಗೆ ಹಾಕಿದಳು.

ಗಾಂಧೀಜಿಯವರು ಮಾತು ಮುಂದುವರಿಯಿತು. "ಈಗ ಹೇಳು, ಎಲ್ಲಾ ಬಂಗಾರ ನನಗೆ ಕೊಟ್ಟಿದ್ದಕ್ಕೆ ಮನೆಯಲ್ಲಿ ಅಪ್ಪ, ಅಮ್ಮ ಬಯ್ಯುವುದಿಲ್ಲವೇ"? ಹುಡುಗಿ ಮುಗ್ಧತೆಯಿಂದ ಹೇಳಿದಳು, "ಬಳೆಗಳನ್ನಷ್ಟೇ ಕೊಡಲು ಹೇಳಿದ್ದಾರೆ," "ಹಾಗಾದರೆ ನಿನ್ನ ಸರ ಮತ್ತು ಓಲೆಗಳನ್ನು ವಾಪಸು ಕೊಡುತ್ತೇನೆ. ನಮ್ಮದು ಬಡದೇಶ, ಇಲ್ಲಿ ಬಹಳಷ್ಟು ಜನರಿಗೆ ಒಂದು ಹೊತ್ತಿನ ಊಟಕ್ಕೂ ಇಲ್ಲ. ಹಾಗಿರುವಾಗ ನೀನು ಇಷ್ಟೊಂದು ಬಂಗಾರ ಧರಿಸುವುದು ತಪ್ಪಲ್ಲವೇ?"

ಇನ್ನು ಮುಂದೆ ಬಂಗಾರ ಧರಿಸುವುದಿಲ್ಲವೆಂದು ನನಗೆ ಮಾತು ಕೊಡುವೆಯಾ ಎಂದು ಗಾಂಧೀಜಿ ಹೇಳಿದ





ಡಾ . ನಿರುಪಮಾ ನಾಯಕ್

ಮಾತಿಗೆ ಹುಡುಗಿ ಹಿಂದೆ ಮುಂದೆ ಯೋಚಿಸದೆ ತಲೆಯಾಡಿಸಿದಳು. ಗಾಂಧೀಜಿಯವರಿಗೆ ಕೊಟ್ಟ ವಚನವನ್ನು ಬದುಕಿನುದ್ದಕ್ಕೂ ಅಕ್ಷರಶಃ ಪಾಲಿಸಿದ ಆಕೆ ಮತ್ಯಾರೂ ಅಲ್ಲ. ದೇಶಕ್ಕೆ ಐದಾರು ಸ್ವಾತಂತ್ರ್ಯ ಹೋರಾಟಗಾರರನ್ನು ನೀಡಿದ ಉಡುಪಿ ಸಮೀಪದ ಕಟಪಾಡಿಯ ಪ್ರಸಿದ್ಧ ನಾಯಕ್ ಕುಟುಂಬದ ಕುಡಿ ನಿರುಪಮಾ. ಮುಂದೇ ಇದೇ ನಿರುಪಮಾ ನಾಯಕ್ ವೈದ್ಯಕೀಯ ಕಲಿತು ಪ್ರಸಿದ್ಧ ಸ್ತ್ರೀ ರೋಗ ತಜ್ಞೆಯಾಗಿ ಪಾಂಡಿಚೇರಿ ಸಹಿತ ಅನೇಕ ಕಡೆ ಸೇವೆ ಸಲ್ಲಿಸಿ ನಿವೃತ್ತರಾದರು. ಅವಿವಾಹಿತೆಯಾಗಿ ಉಳಿದ ಅವರು ಎಂಬತ್ತರ ತನ್ನ ಇಳಿ ವಯಸ್ಸಿನಲ್ಲಿ ಇತ್ತೀಚೆಗೆ ಬೆಂಗಳೂರಿನಲ್ಲಿ ನಿಧನರಾದರು.

ಬಾಲೆ ನಿರುಪಮಾ,

ಗಾಂಧೀಜಿಯವರಿಗೆಗೆ ಕೊಟ್ಟ ಬಳೆಗಳ ಕತೆ ಏನಾಯಿತು? ಪುಟ್ಟ ಹುಡುಗಿಯ ದೇಣಿಗೆಯಿಂದ ಪುಳಕಿತರಾದ ಗಾಂಧೀಜಿ ಆ ಬಳೆಗಳನ್ನು ಸ್ವತಃ ತಾನೇ ಹರಾಜು ಹಾಕಲು ಎದ್ದು ನಿಂತರು. ಹರಾಜು ಒಂದು ನಿರೀಕ್ಷಿತ ಮಟ್ಟ ತಲುಪಿದೊಡನೆ ಹರಾಜು ಕೂಗುವುದನ್ನು ನಿಲ್ಲಿಸಿ ಸವಾಲಿನ ಧಾಟಿಯಲ್ಲಿ ವಿಠಲ ಕಾಮತರೆಡೆಗೆ ನೋಡಿ ಹೇಳಿದರು. "ನೀವು ಹರಾಜು ಕೂಗಿದ್ದರೆ ಬಹುಶಃ ಜಾಸ್ತಿ ರಕಮು ಸಿಗುತ್ತಿತ್ತೇನೋ?" ವಿಠಲ ಕಾಮತರಿಗೆ ಇದು ಗಾಂಧೀಜಿ ತನಗೆಸೆದ ಸವಾಲಿನಂತೆ ಭಾಸವಾಯಿತು. ಅವರು ಬಳೆಗಳನ್ನು ಗಾಂಧೀಜಿಯವರಿಂದ ತೆಗೆದುಕೊಂಡು ಜನರಲ್ಲಿ ನಿವೇದಿಸಿಕೊಂಡರು.

"ಮಹಾಜನರೇ.. ಮಹಾತ್ಮ ಗಾಂಧೀಜಿಯವರು ಇನ್ನೂ ಜಾಸ್ತಿ ಹಣ ಅಪೇಕ್ಷಿಸುತ್ತಿದ್ದಾರೆ. ಈಗ ನಾನು ಹರಾಜು ಕೂಗುತ್ತೇನೆ. ನೀವು ಗಾಂಧೀಜಿಯವರ ನಿರೀಕ್ಷೆ ಸುಳ್ಳು ಮಾಡದೇ ಈ ನೆಲದ ಮಾನ ಕಾಪಾಡಬೇಕು." ವಿಠಲ ಕಾಮತರು ಕೂಗಿದ ಹರಾಜಿನಲ್ಲಿ ನಿರೀಕ್ಷೆಗೂ ಮೀರಿ ಪ್ರತಿಕ್ರಿಯೆ ಬಂತು. ಆಗ ಗಾಂಧೀಜಿಯವರು, " ನಾನೇ ಪಕ್ಕಾ ಬನಿಯಾ ಎಂದೆಣಿಸಿದ್ದೆ. ಈಗ ನೋಡಿದರೆ ನೀವು ನನಗಿಂತ ಚಾಣಾಕ್ಷ ಬನಿಯಾ" ಎಂದು ಹೇಳಿ ಕಾಮತರ ಬೆನ್ನು ತಟ್ಟಿ ತಮ್ಮ ಸೋಲನ್ನು ಒಪ್ಪಿಕೊಂಡರು.

(ಅಕ್ಟೋಬರ್ 10, 2014 ರಲ್ಲಿ ವಿಜಯ ಕರ್ನಾಟಕದಲ್ಲಿ ಪ್ರಕಟವಾದ ಲೇಖನ)

(ಎಂ.ವಿ. ಕಾಮತ್ ಅವರ 'ದಿ ಕ್ಲೋಸ್ ಎನ್ ಕೌಂಟರ್ಸ್' ಇಂಗ್ಲೀಷ್ ಕೃತಿ ಆಧಾರಿತ)

(ಸಂಗ್ರಹ : ರವಿಚಂದ್ರ ಜಂಗಣ್ಣವರ)



# ಗಾಂಧೀಜಿಯವರ ಜೀವನ ಮೌಲ್ಯಗಳು

– ನಾಡೋಜ ಡಾ. ಜಿ. ಕೃಷ್ಣಪ್ಪ

ಮಹಾತ್ಮಗಾಂಧಿ ಸತ್ಯ, ಶಾಂತಿ, ಅಹಿಂಸೆಯ ಹೋರಾಟದಿಂದ ವಿಶ್ವದ ಜನಮಾನಸದಲ್ಲಿ ಒಂದಾಗಿ ಹೋಗಿದ್ದಾರೆ. ಅವರು ಬಾಲ್ಯದಲ್ಲಿ ಸತ್ಯಹರಿಶ್ಚಂದ್ರನ ನಾಟಕ ನೋಡಿ ಸತ್ಯಮಾರ್ಗದಲ್ಲಿ ಜೀವನ ಪೂರ್ತಿ ನಡೆದದ್ದು ಒಂದು ಶ್ರೇಷ್ಠ ಆದರ್ಶ. ಅವರು ಇಂಗ್ಲೆಂಡ್‌ನಲ್ಲಿ ಬ್ಯಾರಿಸ್ಟರ್ ಪರೀಕ್ಷೆಗೆ ಓದುವಾಗ ಆತ್ಮನಿಗ್ರಹದಿಂದ ಸರಳ ಜೀವನ ನಡೆಸಿ ಮದ್ಯಮಾಂಸಗಳಿಂದ ದೂರವಿದ್ದು ತಾಯಿಗೆ ಕೊಟ್ಟ ಮಾತಿನಂತೆ ನಡೆದ ಮಾತೃ ಆರಾಧಕ.

ಜಗತ್ತಿನಲ್ಲಿ ಮೊದಲ ಬಾರಿಗೆ ಜನಾಂಗ ಭೇದ ನೀತಿಯನ್ನು ಕುರಿತು ಪ್ರತಿಭಟನೆಯ ಹೋರಾಟವನ್ನು ಕೈಗೊಂಡವರು ಗಾಂಧಿ. ಆ ಘಟನೆ ನಡೆದು 130 ವರ್ಷವಾಗಿ ಹೋಗಿದೆ. ದಕ್ಷಿಣ ಆಫ್ರಿಕಾದ ಡರ್ಬನ್‌ನಿಂದ ಪ್ರಿಟೋರಿಯಾಕ್ಕೆ ರೈಲಿನಲ್ಲಿ ಪ್ರಥಮ ದರ್ಜೆ ಟಿಕೆಟ್ ಪಡೆದು ಪ್ರಯಾಣಿಸುತ್ತಿದ್ದರು. ದಿನಾಂಕ.07.06.1893 ರ ರಾತ್ರಿ ಮ್ಯಾರಿಟ್ಸ್‌ಬರ್ಗ್‌ನಲ್ಲಿ ವರ್ಣದ್ವೇಷದ ಬ್ರಿಟೀಷರು ರೈಲಿನಿಂದ ಹೊರಕ್ಕೆ ತಳ್ಳಿದರು. ಸ್ವಾಭಿಮಾನಿ, ಘನತೆಯ ಬದುಕಿನ, ಸ್ವತಂತ್ರ ಮನೋಭಾವದ ಕಾನೂನು ಪರಿಣತ ಗಾಂಧೀಜಿ ಮರುದಿನ ರೈಲ್ವೆ ಜನರಲ್ ಮ್ಯಾನೇಜರ್‌ಗೆ ನಡೆದ ಘಟನೆ ತಿಳಿಸಿ ತಂತಿ ಕಳುಹಿಸಿದರು. ಸ್ವಾತಂತ್ರ್ಯ ಮತ್ತು ಗುಲಾಮಗಿರಿ ನಡುವೆ ಚರ್ಚೆ ಪ್ರಾರಂಭಿಸಿದರು.

**ಚತುರ ವಕೀಲ**

ಗಾಂಧಿಯವರು ದಕ್ಷಿಣ ಆಫ್ರಿಕಾದಲ್ಲಿದ್ದ ಅಬ್ದುಲ್ಲಾ ಸೇಠರ 'ಮೆಮನ್' ಸಂಸ್ಥೆಯ ಪರವಾಗಿ ಕೆಲಸ ಮಾಡುತ್ತಿದ್ದ ಹಿರಿಯ ವಕೀಲರಿಗೆ ಸಹಾಯ ಮಾಡಲು ಯುವ ವಕೀಲರಾಗಿ ಡರ್ಬನ್‌ಗೆ ಹೋಗಿದ್ದರು. ಡರ್ಬನ್ ನ್ಯಾಯಾಲಯದಲ್ಲಿ ಮುಂಡಾಸು ಕಟ್ಟಿಕೊಂಡು ಪ್ರವೇಶಿಸಿದ್ದನ್ನು ನ್ಯಾಯಾಧೀಶರು ಪ್ರಶ್ನಿಸಿದರು. ಮುಂಡಾಸು ಧರಿಸುವುದು ತನ್ನ ಹಕ್ಕು, ಧರಿಸಬಾರದೆಂದು ಕಾನೂನು ಇಲ್ಲ ಎಂದು ಹೇಳಿದರು. ಅನಂತರ ನ್ಯಾಯಾಧೀಶರ ಆಜ್ಞೆಗೆ ತಲೆಬಾಗಿ ಹೊರಬಂದರು. ತಮಗಾದ ಅನ್ಯಾಯವನ್ನು ಪತ್ರಿಕೆಗಳಿಗೆ ತಿಳಿಸಿದರು. ಅದು ಸುದ್ದಿಯಾಗಿ, ಚರ್ಚೆಯಾಯಿತು. ಗಾಂಧಿಗೆ ಅನಿರೀಕ್ಷಿತ ಪ್ರಚಾರ ಸಿಕ್ಕಿತು. ಅವರಲ್ಲಿ ಆತ್ಮಾಭಿಮಾನದ ಕೆಚ್ಚು ಹೆಚ್ಚಾಯಿತು.

ಅಬ್ದುಲ್ಲಾ ಸೇಠರ ವಾದಗಳಿಗೆ ಪೂರಕ ಅಂಶಗಳನ್ನು ಸಂಗ್ರಹಿಸಿ ಹಿರಿಯ ವಕೀಲರಿಗೆ ನೀಡುವಾಗ, ನ್ಯಾಯ ತಮ್ಮ ಕಕ್ಷಿದಾರ ಅಬ್ದುಲ್ಲಾ ಸೇಠರ ಕಡೆಗಿರುವುದು ಗಾಂಧೀಗೆ ಗೊತ್ತಾಯಿತು. ಅದು ಪ್ರತಿ ಕಕ್ಷಿದಾರ ತಯ್ಯಬ್ ಸೇಠರೊಂದಿಗಿನ 40,000 ಪೌಂಡ್ ತಗಾದೆ ಕೇಸಾಗಿತ್ತು. ಗಾಂಧಿಯವರು ನ್ಯಾಯಾಲಯದ ಹೊರಗೆ ಪಂಚಾಯಿತಿ ನಡೆಸಿ ಕೇಸನ್ನು ಬಗೆಹರಿಸಿದರು. ಎರಡೂ ಬಣ ಒಂದಾಯಿತು. ಅವರುಗಳು ಗಾಂಧೀಜಿಯ ಜಾಣ್ಮೆಯನ್ನು ಮೆಚ್ಚಿಕೊಂಡರು.

**ಭಾರತೀಯರು ಹಕ್ಕುಗಳ ಹೋರಾಟದ ನಾಯಕ**

ಗಾಂಧಿಯನ್ನು ಭಾರತಕ್ಕೆ ಕಳುಹಿಸಲು ಅಬ್ದುಲ್ಲಾ ಸೇಠರು ಒಂದು ಭವ್ಯ ವಿಧಾಯ ಸಮಾರಂಭವನ್ನಿಟ್ಟು ಕೊಂಡಿದ್ದರು. ಅದೇ ದಿನ 'ನೇಟಾಲ್ ಮರ್ಕ್ಯುರಿ' ಪತ್ರಿಕೆಯಲ್ಲಿ ನೇಟಾಲ್ ಚುನಾವಣೆಯಲ್ಲಿ ಭಾರತೀಯರಿಗೆ ಮತದಾನದ ಹಕ್ಕನ್ನು ನಿರಾಕರಿಸುವ ವಿಧೇಯಕ ಶಾಸನ ಸಭೆಯಲ್ಲಿ ಮಂಡಿಸಲು ತಯಾರಿ ನಡೆಸುವ ವಿಷಯ ಪ್ರಕಟವಾಗಿತ್ತು. ಹಾಗೇನಾದರೂ ಆದರೆ ಭಾರತೀಯರ ಬದುಕು ದುರ್ಬರವಾಗುತ್ತದೆ ಎಂದು ಗಾಂಧಿ ಅಲ್ಲಿದ್ದವರಿಗೆ ತಿಳಿಸಿದರು. ಅವರು

ಅಲ್ಲಿದ್ದ ಒಂದು ವರ್ಷದ ಅವಧಿಯಲ್ಲಿ ಭಾರತೀಯರನ್ನು ಜಾಗೃತರಾಗಿಸಿದ್ದರು. ಆ ಸಭೆಯ ಪ್ರಮುಖರು ಗಾಂಧಿಯನ್ನು ಅಲ್ಲಿಯೇ ಉಳಿಸಿಕೊಂಡು ಹೋರಾಟದ ನಾಯಕರನ್ನಾಗಿಸಿಕೊಂಡರು.

ಭಾರತೀಯರೆಲ್ಲ ಸೇರಿ 22-05-1894 ರಲ್ಲಿ 'ನೇಟಾಲ್ ಇಂಡಿಯನ್ ಕಾಂಗ್ರೆಸ್' ಸ್ಥಾಪನೆ ಮಾಡಿದರು. ಗಾಂಧಿ ಕಾರ್ಯದರ್ಶಿಯಾದರು. ಅವರು ಸ್ಪೀಕರ್‌ಗೆ ಸ್ಥಳೀಯ ಭಾರತೀಯ ಮೂಲ ನಿವಾಸಿಗಳಿಗೆ ಮತದಾನದ ಹಕ್ಕು ನಿರಾಕರಿಸುವುದಕ್ಕೆ ವಿರೋಧವಿದೆ ಎಂದು ತಿಳಿಸಿ ಪತ್ರ ಬರೆದರು. ಸ್ಪೀಕರ್ ಚರ್ಚೆಯನ್ನು ಎರಡು ದಿನ ಮುಂದಕ್ಕೆ ಹಾಕಿದರು. ಅದು ಗಾಂಧಿಗೆ ದೊರೆತ ಮೊದಲ ಜಯವಾಗಿತ್ತು.

ಆದರೆ ಮತ್ತೆ ಸಭೆ ಸೇರಿದಾಗ ವಿಧೇಯಕ ಮಸೂದೆಯಾಗಿ ಕಾನೂನಿನ ರೂಪ ಪಡೆಯಿತು. ಗಾಂಧಿ ವಿಧೇಯಕ ವಿರೋಧದ ಮನವಿ ಪತ್ರಕ್ಕೆ ಹತ್ತು ಸಾವಿರ ಜನರ ಸಹಿ ಮಾಡಿಸಿ ಸರ್ಕಾರಕ್ಕೆ ಸಲ್ಲಿಸಿದರು. ಪ್ರತಿಭಟನೆಯ ಧ್ವನಿ ಹೊರಹೊಮ್ಮಿತು. 'ಲಂಡನ್ ಟೈಮ್ಸ್' ಮತ್ತು ದೊಡ್ಡ ಪತ್ರಿಕೆಗಳು ಗಾಂಧಿ ಚಿತ್ರದೊಂದಿಗೆ ಮುಖಪುಟದಲ್ಲಿ ವರದಿ ಮಾಡಿದವು. ಗಾಂಧಿ, ಭಾರತೀಯ ಜನನಾಯಕರಾಗಿ ಪ್ರಸಿದ್ಧರಾದರು. ನೇಟಾಲ್‌ನಲ್ಲಿ ಉಳಿದರು. ಅಲ್ಲಿ ಸತ್ಯ, ಶಾಂತಿ, ಅಹಿಂಸೆಯ ಕಾನೂನುಬದ್ಧ ಹೋರಾಟದೊಂದಿಗೆ ಅವರ ಜನನಾಯಕ ವ್ಯಕ್ತಿತ್ವ ರೂಪುಗೊಂಡಿತು.

'ನೇಟಾಲ್ ಇಂಡಿಯನ್ ಕಾಂಗ್ರೆಸ್'ನ ಸದಸ್ಯರು ಗಾಂಧೀಯವರು ನೇತಾರನ ಕೆಲಸಕ್ಕೆ 300 ಪೌಂಡ್ ಸಂಬಳ ಪಡೆಯಬೇಕೆಂದು ಹೇಳಿದರು. ಆಗ ಗಾಂಧೀಜಿ 'ಸಮಾಜ ಸೇವೆ ಮಾಡುವವನು ಯಾವುದೇ ಶುಲ್ಕ ತೆಗೆದುಕೊಳ್ಳುವುದು ಅನೀತಿ' ಎಂದು ತಿಳಿಸಿದರು. ಸುಪ್ರೀಂಕೋರ್ಟ್ ನ್ಯಾಯವಾದಿಯಾಗಿ ವರ್ತಕರು ನೀಡುವ ಮೊಕದ್ದಮೆಯಿಂದ 300 ಪೌಂಡ್ ಪಡೆದರು. 'ನೇಟಾಲ್ ಇಂಡಿಯನ್ ಕಾಂಗ್ರೆಸ್'ಗೆ ಕೂಲಿಕಾರರೂ ಸೇರಿ, ಹೆಚ್ಚು ಜನ ಸದಸ್ಯರಾದರು.

**ಹಸಿರು ಕೈಪಿಡಿ**

ಗಾಂಧಿಯವರು 1896 ರಲ್ಲಿ 6 ತಿಂಗಳ ರಜೆ ಪಡೆದು ಭಾರತಕ್ಕೆ ಹೋದರು. ಬ್ರಿಟೀಷರ ಆಳ್ವಿಕೆಯ ಆಫ್ರಿಕಾದಲ್ಲಿನ ಭಾರತೀಯರ ದುಸ್ಥಿತಿಯನ್ನು ಕುರಿತು ಒಂದು ಕಿರುಪುಸ್ತಕ ಬರೆದರು. ಅದಕ್ಕೆ ಹಸಿರು ರಟ್ಟು ಹಾಕಿದರು. ಅದು 'ಹಸಿರು ಕೈಪಿಡಿ' ಎಂದು ಹೆಸರು ಪಡೆಯಿತು. ಅದರ 10,000 ಪ್ರತಿ ಮುದ್ರಿಸಿ ಪತ್ರಿಕೆಗೆ, ಜನರಿಗೆ ಹಂಚಿದರು. ಅದರ ಬಗ್ಗೆ ಪತ್ರಿಕೆಗಳಲ್ಲಿ ವ್ಯಾಪಕ ಚರ್ಚೆ ನಡೆದವು.

ಗಾಂಧಿಯವರು ಮರಳಿ ಬರುವಾಗ ಪತ್ನಿ ಕಸ್ತೂರ್ ಬಾ, ಮಕ್ಕಳಾದ ಹರಿಲಾಲ್, ಮಣಿಲಾಲ್ ಅಕ್ಕನ ಮಗ ಚಗನ್‌ಲಾಲ್‌ನೊಂದಿಗೆ ಹಿಂದಿರುಗಿದರು. ಡರ್ಬಾನ್‌ನಲ್ಲಿ ಗಾಂಧಿ ಹಡಗಿನಿಂದ ಇಳಿದು ಹೋಗುವಾಗ ಕೆಲವು ಬಿಳಿಯ ಪುಂಡ ಯುವಕರು ಅವರ ವಿರುದ್ಧ ಘೋಷಣೆ ಕೂಗಿದರು. ಅವರನ್ನು ಹೊಡೆದು ತುಳಿದು ಹಿಂಸಿಸಿದರು. ಆಗ ಅವರನ್ನು ಬಿಡಿಸಿದವರು ಪೊಲೀಸ್ ಸೂಪರಿಂಟೆಂಡೆಂಟರಿ ಪತ್ನಿ ಶ್ರೀಮತಿ ಅಲೆಗ್ಸಾಂಡರ್. ಇಷ್ಟೆಲ್ಲಾ ಆದರೂ ಗಾಂಧಿಯವರು ಆ ಯುವಕರ ವಿರುದ್ಧ ದೂರು ಕೊಡಲಿಲ್ಲ. ಕ್ರಿಸ್ತ ಹೇಳಿದಂತೆ ಒಂದು ಕೆನ್ನೆಗೆ ಹೊಡೆದರೆ, ಇನ್ನೊಂದು ಕೆನ್ನೆ ಒಡ್ಡುವ ಶಾಂತಿ ಅಹಿಂಸಾ ತತ್ವ ಅನುಸರಿಸಿದರು.

**ಸ್ವಾವಲಂಬನೆಯ ಸರಳ ಸ್ವಚ್ಛ ಬದುಕು**

ಗಾಂಧಿಯವರು ದಕ್ಷಿಣ ಆಫ್ರಿಕಾದ ನೇಟಾಲ್‌ನಲ್ಲಿ ಅಹಿಂಸಾತ್ಮಕ ಪ್ರತಿಭಟನೆಗೆ ನಾಂದಿ ಹಾಡಿದರು. ಅಲ್ಲಿಯ ಹೋರಾಟದ ಸಂದರ್ಭದಲ್ಲಿ 'ಸತ್ಯಾಗ್ರಹ' ಪದ ರೂಪುಗೊಂಡಿತು. ಅವರು ಬಡವರ ಸೇವೆಯಲ್ಲಿದ್ದು, ಜನರಿಗೆ ಸರಳ ಜೀವನ, ಸಮಾನತೆ, ಸರ್ವೋದಯ ತತ್ವ ಬೋಧಿಸುತ್ತಿದ್ದರು. ತಮ್ಮ ನುಡಿಯಂತೆ ಪತ್ನಿ ಕಸ್ತೂರ್ ಬಾ ಮತ್ತು ಮಕ್ಕಳಿಗೆ ಸರಳ ಸ್ವಾವಲಂಬಿ ಸ್ವಚ್ಛ ಬದುಕು ಕಲಿಸಿದರು. ಗಾಂಧಿ ಅವರಿಗೆ ವಕೀಲಿ ವೃತ್ತಿಯಲ್ಲಿ ಚೆನ್ನಾಗಿ ಸಂಪಾದನೆ ಇದ್ದರೂ ಮನೆಯೊಳಗೆ ಸರಳ ಜೀವನ ಪ್ರಯೋಗ ಮಾಡಿದರು.

**ಅನ್ ಟು ದಿ ಲಾಸ್ಟ್**

ಒಮ್ಮೆ ಗಾಂಧಿಯವರು ಜೋಹಾನ್ಸ್ ಬರ್ಗ್‌ನಿಂದ ಡರ್ಬನ್‌ಗೆ 24 ಗಂಟೆ ರೈಲು ಪ್ರಯಾಣಕ್ಕೆ ಹೊರಟಿದ್ದರು. ಗೆಳೆಯ ಪೊಲಾಕ್ ಆಗ ಅವರಿಗೆ ಇಂಗ್ಲಿಷ್ ಲೇಖಕ ಜಾನ್ ರಸ್ಕಿನ್ ಬರೆದ **'ಅನ್ ಟು ದಿ ಲಾಸ್ಟ್'** ಪುಸ್ತಕ ಕೊಟ್ಟರು. ಅದರಲ್ಲಿದ್ದ ರೈತ ಅಥವಾ ಕುಶಲಕರ್ಮಿಯ ಶ್ರಮ ಜೀವನವೇ ನಿಜವಾದ ಜೀವನ ಎಂಬ ವಿಷಯ ಗಾಂಧಿಗೆ ಹೊಸದಾಗಿ ಕಂಡಿತು. ಅವರು ಅದರಂತೆ ಬದುಕಲು ನಿರ್ಧರಿಸಿದರು.

**ಫೀನಿಕ್ಸ್ ವಸತಿ ಕೃಷಿಕ್ಷೇತ್ರ**

ಗಾಂಧಿಯವರು ತಮ್ಮ ಉಳಿತಾಯದ ಹಣದಿಂದ ಡರ್ಬನ್‌ಗೆ ಸುಮಾರು 15 ಮೈಲಿ ದೂರದ, ರೈಲು ಸೌಲಭ್ಯವಿರುವ ಫೀನಿಕ್ಸ್ ಕೃಷಿ ಕ್ಷೇತ್ರವನ್ನು ಕೊಂಡುಕೊಂಡರು. 'ಇಂಡಿಯನ್ ಒಪಿನಿಯನ್' ಪತ್ರಿಕಾ ಕಛೇರಿಯನ್ನು ಅಲ್ಲಿಗೆ ಸ್ಥಳಾಂತರಿಸಿದರು. ಅದೊಂದು ಸಾಮೂಹಿಕ ಬದುಕಿನ ಮಾದರಿಯಾಗಿತ್ತು. ಅದು ಮಿಶ್ರ ಜಾತಿ ಜನಾಂಗ ಧರ್ಮ ದೇಶಗಳ ಬೀಡಾಗಿತ್ತು. ಅಲ್ಲಿ ಮಾತೃಭಾಷೆ ಶಿಕ್ಷಣ, ಪ್ರಕೃತಿ ಚಿಕಿತ್ಸೆಯಿದ್ದು, ಕೃಷಿ ಕ್ಷೇತ್ರದಲ್ಲಿ ದುಡಿಯುವ ಎಲ್ಲರಿಗೂ 3 ಪೌಂಡ್ ವೇತನ ನೀಡಲಾಗುತ್ತಿತ್ತು.

ಗಾಂಧಿಯವರು ತಮ್ಮ ಮನೆ ಮೇಜು ಕುರ್ಚಿ ಮಾರಿ ಬಂದ ಹಣ 5130 ಪೌಂಡ್ ಅನ್ನು ಫೀನಿಕ್ಸ್ ಕೃಷಿ ಕ್ಷೇತ್ರಕ್ಕೆ ದಾನ ಮಾಡಿದರು. ಇತರ ಕೃಷಿಕ ಬಂಧುಗಳಂತೆ ತಿಂಗಳಿಗೆ 3 ಪೌಂಡ್ ವೇತನ ಪಡೆದರು. ಅಂತ್ಯೋದಯ ಪ್ರಯೋಗದ ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು ತತ್ತ್ವದಂತೆ ಬಾಳಿ ಶ್ರೇಷ್ಠ ಆದರ್ಶ ವ್ಯಕ್ತಿಯಾದರು.

ಅವರು ಹೆಂಡತಿ ಮಕ್ಕಳಿಗೆ ಸಂಪತ್ತನ್ನು ಕೂಡಿಡುವುದು ಸರಿಯಲ್ಲ ಎಂಬ ನೀತಿಗೆ ಒಳಗಾಗಿದ್ದರು. ಹಿಂದೊಮ್ಮೆ ಭಾರತಕ್ಕೆ ಹೊರಟಾಗ ಅಬ್ದುಲ್ಲಾ ಸೇಠ್ ಮತ್ತು ಗೆಳೆಯರು ಸೇರಿ ಸಾವಿರಾರು ಪೌಂಡ್ ಬೆಲೆ ಬಾಳುವ ಬೆಳ್ಳಿ ಬಂಗಾರ ನೀಡಿದ್ದರು. ಅದನ್ನೆಲ್ಲಾ ಮಾರಿ ಬಂದ ಹಣವನ್ನು ದಕ್ಷಿಣ ಆಫ್ರಿಕಾದಲ್ಲಿರುವ ಬಡವರಿಗೆ ನೀಡಿ ಎಂದು ಕರಾರು ಪತ್ರ ಬರೆಸಿ ಅಲ್ಲಿಯೇ ಬ್ಯಾಂಕಿಗೆ ಒಪ್ಪಿಸಿ ಬಿಟ್ಟಿದ್ದರು.

**ಸಾತ್ವಿಕ ಪ್ರತಿರೋಧ ಆಂದೋಲನ**

ದಕ್ಷಿಣ ಆಫ್ರಿಕಾದಲ್ಲಿ ಎಂಟು ವರ್ಷ ಮೀರಿರುವ ಪ್ರತಿ ಭಾರತೀಯರು ತಮ್ಮ ಗುರುತಿನ ಚೀಟಿ ಪಡೆಯಬೇಕು. ಇಲ್ಲದಿದ್ದರೆ ಕಠಿಣವಾಗಿ ಶಿಕ್ಷಿಸಲು, ದೇಶದಿಂದ ಬಹಿಷ್ಕರಿಸಲು ಪೊಲೀಸರಿಗೆ ಅಧಿಕಾರ ಕೊಡುವ ಕರಾಳ ಏಶಿಯಾಟಿಕ್ ಶಾಸನ ಅಲ್ಲಿನ ಸರ್ಕಾರ ತಂದಿತು. ಗಾಂಧಿಯವರು ಜೋಹಾನ್ಸ್ ಬರ್ಗ್‌ನಲ್ಲಿ ಆ ಕಾನೂನಿನ ವಿರುದ್ಧ ಸಾತ್ವಿಕ ಪ್ರತಿರೋಧದ ಆಂದೋಲನ ನಡೆಸಿ

ಪ್ರತಿಭಟಿಸಿದರು. ಆಗ ಗಾಂಧಿಯವರನ್ನು ಬಂಧಿಸಿ 2 ತಿಂಗಳು ಜೇಲಿಗೆ ದೂಡಿದರು. ಅದು ಅವರ ಮೊದಲ ಜೇಲುವಾಸವಾಗಿತ್ತು. 1908 ಜನವರಿ 10 ರಂದು ನ್ಯಾಯಾಧೀಶರ ಆಜ್ಞೆಯಂತೆ ಹೊರಬಂದರು.

ಗಾಂಧಿಯವರು ಸತ್ಯದಲ್ಲಿ ನಿಷ್ಠೆ ಹಾಗೂ ನಂಬಿಕೆ ಪ್ರಮುಖವಾಗಿದ್ದು, ಸತ್ಯಾಗ್ರಹದ ಮೂಲಾಧಾರ ನಿರ್ಭಯತೆ ಎಂದು ತಿಳಿದಿದ್ದರು. ಅವರು ಒಮ್ಮೆ ಜೇಲುವಾಸ ಅನುಭವಿಸಿ ಹೊರಬರುವಾಗ ಕರೆದುಕೊಂಡು ಹೋಗಲು ಅವರ ಸೇವಾ ಮನೋಭಾವದಿಂದ ಪ್ರೇರಿತರಾಗಿ ಸ್ನೇಹಿತರಾಗಿದ್ದ ಜರ್ಮನ್ ದೇಶದ ವಾಸ್ತು ಶಿಲ್ಪಿ ಕಲೆನ್‌ಬಾಕ್ ರೋಲ್ಸ್‌ರಾಯ್ಸ್ ಕಾರಿನಲ್ಲಿ ಬಂದಿದ್ದರು. ಅದನ್ನು ನೋಡಿದ ಗಾಂಧಿ, ಅದನ್ನು ಮಾರಿದರೆ ಇನ್ನೊಂದು ಕೃಷಿ ಕ್ಷೇತ್ರ ಕೊಳ್ಳಬಹುದೆಂದರು. ಆ ಕಾಲೆನ್‌ಬಾಕ್ ಅದನ್ನು ದಳ್ಳಾಳಿ ಅಂಗಡಿಯಲ್ಲಿ ಮಾರಿ ಬಂದರು. ಗಾಂಧಿ ಕೇಳಿದರು: 'ಎಷ್ಟು ನಷ್ಟವಾಯಿತು?' ಕಲೆನ್‌ಬಾಕ್ ಉತ್ತರ: 'ಇನ್ನೆರೆಡು ಕೃಷಿಕ್ಷೇತ್ರ ಕೊಳ್ಳಬಹುದಾದಷ್ಟು.

**ಟಾಲ್‌ಸ್ಟಾಯ್ ಫಾರ್ಮ್**

ಅನಂತರ ಕಾಲೆನ್‌ಬಾಕ್ ಅವರು ಜೋಹಾನ್ಸ್‌ಬರ್ಗ್ ನಿಂದ 21 ಮೈಲಿ ದೂರದಲ್ಲಿದ್ದ 1100 ಎಕರೆ ಹಣ್ಣಿನ ತೋಟ ಕೊಂಡರು. ಅದನ್ನು ಗಾಂಧಿಗೆ ಉಡುಗೊರೆಯಾಗಿ ನೀಡಿದರು. ಗಾಂಧಿ ಅದನ್ನು 'ಟಾಲ್‌ಸ್ಟಾಯ್ ಪಾರ್ಮ್' ಎಂದು ಕರೆದು, ಸಮಾನವಾಗಿ ದುಡಿದು ಸಮಾನವಾಗಿ ಹಂಚಿಕೊಂಡು ಎಲ್ಲರು ಸ್ವಾವಲಂಬಿಗಳಾಗುವಂತೆ ಮಾಡಿದರು. ಆ ತೋಟ ತುಂಬ ಪ್ರಸಿದ್ಧವಾಯಿತು.

**ಸತ್ಯಾಗ್ರಹಿಗಳ ಬೃಹತ್ ಜಾಥಾ**

ಕೂಲಿ ಕಾರ್ಮಿಕರ ಮೇಲಿನ ವಾರ್ಷಿಕ ಮೂರು ಪೌಂಡುಗಳ ತೆರಿಗೆ, ಭಾರತೀಯ ಮಹಿಳೆಯರ ವಿವಾಹಕ್ಕೆ ಸಂಬಂಧಿಸಿದ ಹೆಂಡತಿ ಮಕ್ಕಳ ಪ್ರಜೆತನ ಪ್ರಶ್ನಿಸುವ ವಿವಾದ, ವರ್ಣಭೇದ ನೀತಿಯ ವಿರುದ್ಧದ ಹೋರಾಟ ಗಾಂಧಿಯವರ ನೇತೃತ್ವದಲ್ಲಿ 1913 ರಲ್ಲಿ ನಡೆಯಿತು. ಭಾರತೀಯ ಕೂಲಿ ಕಾರ್ಮಿಕರ ಬೃಹತ್ ಜಾಥಾ ಹೊರಟಿತು. ಅದರಲ್ಲಿ ಸಾವಿರಾರು ಗಣಿ ಕಾರ್ಮಿಕರು, ತೋಟಗಳ ಕೂಲಿ ಕಾರ್ಮಿಕರ ಜೊತೆಗೆ ಮಹಿಳೆಯರು ಮಕ್ಕಳು ಭಾಗವಹಿಸಿದರು. ಅಂತಹ ಶಾಂತಿಯುತ, ಅಹಿಂಸಾ ಸತ್ಯಾಗ್ರಹ ಜಾಥಾವನ್ನು ಈ ಜಗತ್ತು ಮೊದಲು ಕಂಡಿತು!

**ಹೋರಾಟದಲ್ಲಿ ಕಾರ್ಮಿಕರು ಗುಂಡಿಗೆ ಬಲಿಯಾದುದು**

ಗಾಂಧಿಯವರು ನೆಟಾಲ್‌ನಿಂದ ಕಾರ್ಮಿಕರ ಜಾಥ ನಡೆಸಿದ್ದು, ಕಾರ್ಮಿಕರನ್ನು ಅಕ್ರಮವಾಗಿ ಟ್ರಾನ್ಸ್‌ವಾಲ್‌ಗೆ ಕರೆದುಕೊಂಡು ಹೋದುದು ಅಪರಾಧವೆಂದು ನ್ಯಾಯಾಲಯ ತೀರ್ಪು ನೀಡಿತು. ಅವರಿಗೆ 1913 ನವಂಬರ್ 11 ರಂದು ಒಂದು ವರ್ಷ ಸೆರೆಮನೆ ವಾಸದ ಸಶ್ರಮ ಶಿಕ್ಷೆ ನೀಡಿತು.

ಅವರ ಬಂಧನದ ನಂತರ ನವಂಬರ್ 13 ರಂದು 2700 ಕೂಲಿ ಕಾರ್ಮಿಕರು ಕಬ್ಬು ಮತ್ತು ಸಕ್ಕರೆ ಕ್ಷೇತ್ರವಾದ ಮೌಂಟ್ ಎಜಾಕಾಬ್‌ನಲ್ಲಿ ಮುಷ್ಕರ ಹೂಡಿದರು. ಅದು ಹಿಂಸೆಗೆ ತಿರುಗಿ ಪೊಲೀಸರ ಗುಂಡಿಗೆ ನಾಲ್ಕು ಜನ ಕಾರ್ಮಿಕರು ಬಲಿಯಾದರು.

**ಕಾರ್ಮಿಕರಂತೆ ಒಂದು ಧೋತರ ಎರಡು ತುಂಡು ಬಟ್ಟೆ ಧರಿಸಿದ ಗಾಂಧಿ**

ಗಾಂಧಿ ಬಿಡುಗಡೆ ನಂತರ ಡರ್ಬಾನ್‌ಗೆ ಹೋದರು. ಅಲ್ಲಿಯ ರೈಲ್ವೆ ನಿಲ್ದಾಣಕ್ಕೆ ಬಂದ ಸಾವಿರಾರು ಕಾರ್ಮಿಕರಿಗೆ ಆಶ್ಚರ್ಯವಾಗುವಂತೆ ಗಾಂಧಿ ಕಾರ್ಮಿಕರ ಉಡುಪಾದ ಒಂದು ಧೋತರ, ಮೇಲೆ ಎರಡು ತುಂಡು ಬಿಳಿ ಬಟ್ಟೆಯಲ್ಲಿದ್ದರು. ಹಾಗಿರಲು ಕಾರಣ ಕೇಳಿದಾಗ ಕಾರ್ಮಿಕರ ಗುಂಡು ತನ್ನ ಎದೆ ಹೊಕ್ಕಂತಾಯಿತು. ಇನ್ನು ಮುಂದೆ ತಾವು ಕಾರ್ಮಿಕರ ಉಡುಪಿನಲ್ಲಿಯೇ ಇರುವ ತಮ್ಮ ನಿರ್ಧಾರ ತಿಳಿಸಿದರು. ಅವರು ಜೀವನ ಪೂರ್ತಿ ಅದೇ ಉಡುಪಿನಲ್ಲಿದ್ದರು!

**ಮಹಿಳಾ ಹೋರಾಟಗಾರರ ನೇತೃತ್ವ ವಹಿಸಿದ ಕಸ್ತೂರ್ ಬಾ**

ಏಷ್ಯನ್ನರು ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂತ್ಯಕ್ಕೆ ರಹದಾರಿ ಪತ್ರವಿಲ್ಲದೆ ಪ್ರವೇಶಿಸುವುದು ಅಪರಾಧವಾಗಿತ್ತು. ಅದನ್ನು ಉಲ್ಲಂಘಿಸಿ ಹೋರಾಟ ನಡೆಸುವ ಮಹಿಳೆಯರ ನೇತೃತ್ವವನ್ನು ಕಸ್ತೂರ್ ಬಾ ವಹಿಸಿಕೊಂಡರು. ಆ ಪ್ರತಿಭಟನೆಯಲ್ಲಿ ಸರ್ಕಾರ ಕಸ್ತೂರ್ ಬಾ ಮತ್ತು ಇತರ ಮಹಿಳೆಯರನ್ನು 1913 ಅಕ್ಟೋಬರ್‌ನಲ್ಲಿ ದಸ್ತಗಿರಿ ಮಾಡಿತು. ಅವರು 3 ತಿಂಗಳು ಜೇಲುವಾಸ ಅನುಭವಿಸಿದರು.

ಈ ಎಲ್ಲ ಹೋರಾಟ, ಸಂಧಾನ, ಮಾತುಕತೆಗಳ ಫಲವಾಗಿ ಸರ್ಕಾರ ತನ್ನ ಆದೇಶಗಳನ್ನು ಹಿಂತೆಗೆದುಕೊಂಡು ಗೆಜೆಟ್‌ನಲ್ಲಿ ಪ್ರಕಟಿಸಿತು. 1. ಮೂರು ಪೌಂಡ್ ತೆರಿಗೆ ರದ್ದಾಯಿತು. 2. ಭಾರತದಲ್ಲಿ ಕ್ರಮಬದ್ಧವೆನಿಸಿದ ಎಲ್ಲ ಮದುವೆಗಳನ್ನು ಮಾನ್ಯ ಮಾಡಲಾಯಿತು. 3. ಹೆಬ್ಬೆಟ್ಟಿನ ಗುರುತಿನ ಚೀಟಿ ಸಾಕು. ಈ ಬಗೆಯ ಆದೇಶದಿಂದ ದಕ್ಷಿಣ ಆಫ್ರಿಕಾದಲ್ಲಿ ಭಾರತದ ಕಟ್ಟಕಡೆಯ ಪ್ರಜೆಗೂ ನ್ಯಾಯ ದೊರಕಿತು.

ಗಾಂಧಿಯವರು 21 ವರ್ಷ ಕಾಲ ಅಹಿಂಸಾ ಹೋರಾಟ ನಡೆಸಿ, ಸತ್ಯಾಗ್ರಹ ಅಸ್ತ್ರವನ್ನು ಜಗತ್ತಿಗೆ ನೀಡಿ ಯಶಸ್ವಿಯಾದರು. ಅವರು ತಮ್ಮ ಶಾಂತಿಯ ಹೋರಾಟ ಫಲರೂಪಿಯಾದುದರಿಂದ 1914 ಜುಲೈ 14 ರಂದು ದಕ್ಷಿಣಾ ಆಫ್ರಿಕಾಗೆ ವಿದಾಯ ಹೇಳಿದರು. ಲಂಡನ್‌ಗೆ ಹೋಗಿ ತಮ್ಮ ರಾಜಕೀಯ ಗುರು ಗೋಪಾಲಕೃಷ್ಣ ಗೋಖಲೆ ಅವರನ್ನು ಕಂಡು ಮಾರ್ಗದರ್ಶನ ಪಡೆದರು. ಅನಂತರ ಭಾರತಕ್ಕೆ ಹೊರಟರು.

**ಭಾರತದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಮುಂದಾಳತ್ವ**

1895 ರಿಂದ ತಿಲಕ್, ಅರವಿಂದ, ಚಿತ್ತರಂಜನದಾಸ್, ಲಾಲಾ ಲಜಪತರಾಯ್, ಬಿಪಿನ್ ಚಂದ್ರಪಾಲ್ ಮುಂತಾದವರು ಸ್ವಾತಂತ್ರ್ಯ ಹೋರಾಟ ನಡೆಸುತ್ತಿದ್ದರು. ಅದು ವಿದ್ಯಾವಂತ ಮಧ್ಯಮವರ್ಗದ ಹೋರಾಟವಾಗಿತ್ತು. 1920 ರಿಂದ ಗಾಂಧಿಯವರು ಸ್ವಾತಂತ್ರ್ಯ ಸಂಗ್ರಾಮದ ಮುಂದಾಳತ್ವ ವಹಿಸಿದರು. ಅವರು ಭಾರತದ ಸ್ವಾತಂತ್ರ್ಯಕ್ಕಾಗಿ ಸತ್ಯಾಗ್ರಹವನ್ನು ಒಂದು ಅಸ್ತ್ರವಾಗಿ ಬಳಸಿ ಅದನ್ನು ಜನಸಂಗ್ರಾಮವಾಗಿಸಿದರು. ಸತ್ಯಾಗ್ರಹಿಗಳಾದ ಸಾಮಾನ್ಯರಲ್ಲಿ ಪ್ರಶ್ನಿಸುವ ಕೆಚ್ಚನ್ನು ಉಂಟು ಮಾಡಿದರು. ಸತ್ಯ ಅಹಿಂಸೆ, ಶೀಲ, ಕರ್ತವ್ಯಪಾಲನೆ ಯಡಿಯಲ್ಲಿ ಮೂವತ್ತು ಮೂರು ಕೋಟಿ ಜನರನ್ನು ಒಂದಾಗಿಸಿ ಹೋರಾಟ ಮಾಡಿದರು.

**ಭಾರತದಲ್ಲಿ ಗಾಂಧಿಯವರ ಪ್ರಥಮ ಸತ್ಯಾಗ್ರಹ**

ಗಾಂಧಿಯವರು 1916 ರಲ್ಲಿ ಲಕ್ನೋದಲ್ಲಿ ನಡೆದ ಕಾಂಗ್ರೆಸ್ ವಾರ್ಷಿಕ ಅಧಿವೇಶನದಲ್ಲಿ ಭಾಗವಹಿಸಿದರು. ಅದರಲ್ಲಿ ಸ್ವರಾಜ್ಯ ಪ್ರಯತ್ನದಲ್ಲಿ ರೈತರನ್ನೂ ಒಳಗೊಳ್ಳಬೇಕೆಂದು ಪ್ರಾರ್ಥಿಸಿದರು. ಅಲ್ಲಿಗೆ

ಬಂದಿದ್ದ ಭೂ ಮಾಲೀಕರ ದೌರ್ಜನ್ಯದ ವಿರುದ್ಧ ರೈತರನ್ನು ಸಂಘಟಿಸಿದ್ದ ರಾಜಕುಮಾರ ಶುಕ್ಲಾ ಅವರ ಕೋರಿಕೆಯಂತೆ ಗಾಂಧಿ ಚಂಪಾರಣ್ಯಕ್ಕೆ ಹೋದರು. ಅಲ್ಲಿಯ ರೈತರು 'ತೀನ್‌ಕಠಿಯಾ' ಪದ್ಧತಿಯಲ್ಲಿ ನೀಲಿ ಬೆಳೆಯುವುದು ಕಡ್ಡಾಯವಾಗಿತ್ತು. ಅವರ ಸಮಸ್ಯೆಯ ಆಳ ಅಗಲ ತಿಳಿದರು.

ಚಂಪಾರಣ್‌ನ ರಾಜಧಾನಿ ಮೋತಿಹಾರಿಯ ಜಿಲ್ಲಾ ಮ್ಯಾಜಿಸ್ಟ್ರೇಟ್ ಗಾಂಧಿಗೆ ಹೋರಾಟ ಮಾಡದೆ ನಗರ ಬಿಟ್ಟು ಹೋಗಲು ಆಜ್ಞಾಪಿಸಿದರು. ಗಾಂಧಿ ಊರು ಬಿಟ್ಟು ಹೋಗಲು ಕಾರಣವಿಲ್ಲವೆಂದು ತಾವು 700 ಜನ ರೈತರಿಂದ ಸಂಗ್ರಹಿಸಿದ್ದ ಅಹವಾಲು ನೀಡಿ ಸತ್ಯಾಗ್ರಹದ ಪ್ರಥಮ ಹೋರಾಟ ಪ್ರಾರಂಭಿಸಿದರು. ನ್ಯಾಯಾದೀಶ ಪೊಲೀಸರಿಂದ ಮುಕ್ತಗೊಂಡ ರೈತರು ಜಯಕಾರ ಮಾಡಿ ಗಾಂಧಿಯ ಜೊತೆ ನಿಂತರು. ಗಾಂಧಿಯವರ ಸತ್ಯಾಗ್ರಹ ಚಳುವಳಿಯೆಂದರೆ ರೈತರ, ಜನರ ನ್ಯಾಯಬದ್ಧ ಬೇಡಿಕೆಗಳನ್ನು ಸರ್ಕಾರಕ್ಕೆ ತಿಳಿಸುವುದು. ಭಿನ್ನಾಭಿಪ್ರಾಯಗಳಿಗೆ ಕಾರಣ ಶೋಧಿಸಿ ಇರುವ ಸತ್ಯ ಹಾಗೂ ನ್ಯಾಯವನ್ನು ಮನವರಿಕೆ ಮಾಡಿಕೊಡುವುದು. ಜೀವನದ ಮೂಲ ತತ್ವವಾದ ಲೋಕ ಕಲ್ಯಾಣದ ಸಹಬಾಳ್ವೆ ತತ್ವವನ್ನು ಸರ್ಕಾರಕ್ಕೆ ಮನಗಾಣಿಸುವುದು.

ಅವರು 8,000 ರೈತರ ಅಹವಾಲನ್ನು ಲೆ.ಗವರ್ನರ್‌ಗೆ ನೀಡಿದರು. ಸರ್ಕಾರ ವಿಚಾರಣಾ ಆಯೋಗ ನೇಮಿಸಿತು. ಅದು ರೈತರಿಗೆ ಅನ್ಯಾಯವಾಗಿರುವುದು ತಿಳಿದು 'ತೀನ್‌ಕಠಿಯಾ' ಪದ್ಧತಿ ನಿಷೇಧಿಸಲು, ಮಾಲೀಕರು ರೈತರಿಗೆ ಪರಿಹಾರ ನೀಡಲು ವರದಿ ನೀಡಿತು. ಗಾಂಧಿಯವರ ಶಾಂತ ಚಿಂತನಶೀಲ ಭಾರತದ ಪ್ರಥಮ ಸತ್ಯಾಗ್ರಹ ಯಶಸ್ವಿಯಾಯಿತು.

**ಭಾರತದಲ್ಲಿ ಮೊದಲ ಉಪವಾಸ ಸತ್ಯಾಗ್ರಹ**

1918 ರಲ್ಲಿ ಗಾಂಧಿಯವರು ಅಹಮದಾಬಾದ್‌ನ ಹತ್ತಿಗಿರಣಿ ಕಾರ್ಮಿಕರ ಪರವಾಗಿ ಹೋರಾಟ ನಡೆಸಿದರು. ಕೆಲಸ ನಿಲ್ಲಿಸಿ ಮುಷ್ಕರ ಹೂಡಲು ಕರೆಕೊಟ್ಟರು. ಆದರೆ ಕೆಲವು ಕಾರ್ಮಿಕರು ಗಾಂಧಿಯ ಹೋರಾಟದ ಬಗ್ಗೆ ಪ್ರಶ್ನಿಸುವ ರೀತಿ ನಡೆದುಕೊಂಡರು. ಆಗ ಸತ್ಯಮಾರ್ಗದ ಗಾಂಧೀಜಿ ಸಾರ್ವಜನಿಕ ಉದ್ದೇಶದಿಂದ ಮಾರ್ಚ್ 15 ರಂದು ಉಪವಾಸ ಮಾಡಿದರು. ಅವರ ಉಪವಾಸ ಸತ್ಯಾಗ್ರಹ



ಕಂಡು ನಾವಿಕರು, ಕಾರ್ಮಿಕರು ಒಪ್ಪಂದ ಮಾಡಿಕೊಂಡರು. ಗಾಂಧಿಯವರು ಮಾರ್ಚ್ 18 ರಂದು ಉಪವಾಸ ಅಂತ್ಯಗೊಳಿಸಿದರು.

**ಸಬರಮತಿ ಆಶ್ರಮ**

ಗಾಂಧಿಯವರು ಫೀನಿಕ್ಸ್ ಕೃಷಿ ಕ್ಷೇತ್ರದಿಂದ ಬಂದ ಇಪ್ಪತ್ತೈದು ಸತ್ಯಾಗ್ರಹಿಗಳಿಗೆ ಅಹಮದಾಬಾದಿನಲ್ಲಿ ಆಶ್ರಮ ನಿರ್ಮಿಸಿಕೊಡಲು ಮುಂದಾದರು. ಬ್ಯಾರಿಸ್ಟರ್ ಜೀವನಲಾಲ ದೇಸಾಯಿಯವರ 'ಕೋಚ್‌ರಾಬ್' ಬಂಗಲೆ 'ಸತ್ಯಾಗ್ರಾಮ ಆಶ್ರಮ'ವಾಯಿತು. ಆದರೆ ಅಸ್ಪೃಶ್ಯರಾದ ದೂಧಾಬಾಯಿ ಬಂದು ಸೇರಿದಾಗ, ದೇಸಾಯಿಯವರ ಆಳು ಅವನು ಬಾವಿಯಲ್ಲಿ ನೀರು ಸೇದಿದ್ದನ್ನು ತಿಳಿಸಿದನು. ಅದನ್ನು ಅವರು ಸಹಿಸಲಿಲ್ಲ. ಜಾತಿರಹಿತ ಸುಧಾರಣೆ ಒಪ್ಪದೆ ಆಶ್ರಮವಾಸಿಗಳಿಗೆ ಬಹಿಷ್ಕಾರ ಹಾಕಿದರು. ಆಗ ಗಾಂಧಿಯವರು ಅಸ್ಪೃಶ್ಯರ ಕೇರಿಗೆ ಆಶ್ರಮ ವರ್ಗಾಹಿಸಬೇಕೆಂದು ನಿರ್ಧರಿಸಿದರು.

ಆ ಸಂದರ್ಭದಲ್ಲಿ ಅಹಮದಾಬಾದಿನ ಉದ್ಯಮಿ ಅಂಬಾಲಾಲರು ನೀಡಿದ ರೂಪಾಯಿ 13 ಸಾವಿರದಿಂದ ಗಾಂಧಿಜಿ ಸಬರಮತಿ ನದೀ ತೀರದಲ್ಲಿ ಜಮೀನು ಕೊಂಡರು; 'ಸಬರಮತಿ ಆಶ್ರಮ' ಪ್ರಾರಂಭಿಸಿದರು. 'ಚರಕಾ' ಸ್ವಾವಲಂಬನೆಯ ಸಂಕೇತವಾಯಿತು. ಗ್ರಾಮೋದ್ಯೋಗಕ್ಕೆ ಒತ್ತುಕೊಟ್ಟರು.

ಆಶ್ರಮದ ಈ ಹನ್ನೊಂದು ಸೂತ್ರಗಳು ಆಶ್ರಮವಾಸಿಗಳ ನಿತ್ಯ ಜಪವಾದವು: ಸತ್ಯ, ಅಹಿಂಸೆ, ನಿರ್ಭಯತೆ, ಸಂಯಮದ ಜೀವನ, ಸಚ್ಚಾರಿತ್ರ್ಯ, ಸರ್ವಧರ್ಮ ಸಮಭಾವ, ಶ್ರಮನಿಷ್ಠೆ, ಸ್ವದೇಶಿ ವ್ರತ, ಅಸ್ಪೃಶ್ಯತೆಯ ನಿವಾರಣೆ, ಅಸ್ವಾದ, ಅಸಂಗ್ರಹ.

**ಉಪ್ಪಿನ ಸತ್ಯಾಗ್ರಹ: ದಂಡಿ ಪಾದಯಾತ್ರೆ**

ಬ್ರಿಟೀಷ್ ಸರ್ಕಾರವು ನಿಸರ್ಗದತ್ತವಾಗಿರುವ ಉಪ್ಪಿನ ಮೇಲೆ ಬಡವರು ತೆರಲಾರದಷ್ಟು ತೆರಿಗೆ ವಿಧಿಸಿತ್ತು. ಅದನ್ನು ವಿರೋಧಿಸಿ ಗಾಂಧೀ ನಡೆಸಿದ ಉಪ್ಪಿನ ಸತ್ಯಾಗ್ರಹ ಎಲ್ಲ ಜಾತಿ ಮತ ಪಂಥಗಳ ಜನರನ್ನು ಒಳಗೊಳ್ಳುವುದಾಗಿತ್ತು. ಅವರು ಗುಜರಾತ್‌ನ ಸೂರತ್ ಬಳಿಯ ದಂಡಿ ಎಂಬಲ್ಲಿ (ಅಹಮದಾಬಾದ್ ನಿಂದ 280 ಕಿ.ಮೀ ದೂರದ ಊರು) ಸತ್ಯಾಗ್ರಹ ನಡೆಸಲು 1930 ಮಾರ್ಚ್ 12 ರಂದು ಸಬರಮತಿ ಆಶ್ರಮದಿಂದ ಪಾದಯಾತ್ರೆ ಪ್ರಾರಂಭಿಸಿದರು. ಅದರಲ್ಲಿ ಸಾವಿರಾರು ಜನ ಭಾಗವಹಿಸಿದರು. ರಾಷ್ಟ್ರದ ಹಲವಾರು ನಾಯಕರು ಆ ನಡಿಗೆಯಲ್ಲಿ ಜೊತೆಗೂಡಿದರು. ಆ ಯಾತ್ರೆ ಜೂನ್ 1 ರಂದು ಸೂರತ್ ತಲುಪಿತು. ಗಾಂಧಿಯವರು ಲಕ್ಷಕ್ಕೂ ಹೆಚ್ಚು ಸೇರಿದ್ದ ಜನರನ್ನುದ್ದೇಶಿಸಿ ಕಾಯ್ದೆ ಭಂಗ ಮಾಡಲು ಕರೆ ಕೊಟ್ಟರು.



ಪಾದಯಾತ್ರೆಯು ಬರೋಡ, ನವಸಾರಿ ದಾಟಿ ಏಪ್ರಿಲ್ 5 ರಂದು ದಂಡಿ ಗ್ರಾಮ ತಲುಪಿತು. ಗಾಂಧಿಯವರು 24 ದಿನಗಳ ದೀರ್ಘಯಾತ್ರೆಯ ಕೊನೆ ದಿನ ಏಪ್ರಿಲ್ 6 ರಂದು ಬೆಳಿಗ್ಗೆ ಸಮುದ್ರದ ಅಲೆಯಲ್ಲಿ ಸಾಗಿದರು. ಒಂದು ಹಿಡಿ ಉಪ್ಪು ಹಿಡಿದು ನೆರೆದಿದ್ದ ಜನರಿಗೆ ತೋರಿಸಿ ಕಾನೂನುಭಂಗ ಮಾಡಿದರು. ಆ ಬಗೆಯ ಅಸಹಕಾರ ಸತ್ಯಾಗ್ರಹ ಜನರ ಶಾಂತಿ, ಶಿಸ್ತು, ಪ್ರೀತಿ ವಿಶ್ವಾಸ, ಗಾಂಧಿ ಬಗೆಗಿನ ನಿಷ್ಠೆಯಿಂದ ಯಶಸ್ವಿಯಾಗಿತ್ತು. ಅನಂತರ ದೇಶದ ಹಲವು ಕಡೆ ಉಪ್ಪಿನ ಕರ ರಹಿತ ಮಾರಾಟದ ಕಾನೂನುಭಂಗ ಚಳವಳಿ ನಡೆಯಿತು. ಸರ್ಕಾರ ಜವಾಹರಲಾಲ್ ನೆಹರು, ರಾಜೇಂದ್ರ ಪ್ರಸಾದ್, ರಾಜಾಜಿ ಮುಂತಾದ ನಾಯಕರನ್ನು ಬಂಧಿಸಿತು.

ಗಾಂಧಿಯವರು ಅನಂತರ ಮದ್ಯಪಾನ ನಿರೋಧ ಚಳುವಳಿಯನ್ನು ನಡೆಸುತ್ತ ಕರಾವಳಿಯ ಹಳ್ಳಿಗಳಲ್ಲಿ ಪ್ರವಾಸ ಮಾಡಿದರು. ಸರ್ಕಾರ ಅವರನ್ನು ಮೇ 4 ರಂದು ಬಂಧಿಸಿ ಪೂನಾದ ಯರವಾಡ ಸೆರೆಮನೆಯಲ್ಲಿಟ್ಟಿತು. ದೇಶದಾದ್ಯಂತ ಉಪ್ಪಿನ ಸತ್ಯಾಗ್ರಹ ನಡೆದು 90 ಸಾವಿರಕ್ಕೂ ಹೆಚ್ಚು ಜನ ದಸ್ತಗಿರಿಯಾಗಿ ಸೆರೆಮನೆವಾಸ ಅನುಭವಿಸಿದರು.

ಒಡೆದು ಆಳುವ ಬ್ರಿಟೀಷರು ಮುಸ್ಲಿಮರಿಗೂ, ಅಸ್ಪೃಶ್ಯರಿಗೂ ಪ್ರತ್ಯೇಕ ಚುನಾವಣಾ ಅವಕಾಶ ಕಲ್ಪಿಸುವ ಕಮ್ಯೂನಲ್ ಅವಾರ್ಡ್ ತಂದಿತು. ಅದನ್ನು ವಿರೋಧಿಸಿ ಗಾಂಧೀಜಿ ಜೈಲಿನಲ್ಲಿ ಅಮರಣಾಂತ ಉಪವಾಸ ಮಾಡಿದರು. ಸರ್ಕಾರ ಕಮ್ಯುನಲ್ ಅವಾರ್ಡ್ ಹಿಂತೆಗೆದುಕೊಂಡಿತು.

ಗಾಂಧೀಜಿಯವರು 'ಹರಿಜನ ಸೇವಾ ಸಂಘ' ಸ್ಥಾಪಿಸಿ 'ಹರಿಜನ ಪತ್ರಿಕೆ' ಪ್ರಾರಂಭಿಸಿದರು. ಅಸ್ಪೃಶ್ಯತೆ ಹಿಂದೂ ಧರ್ಮದ ಶಾಪ ಎಂದು ಕರೆಕೊಟ್ಟರು. ಅದಕ್ಕಾಗಿ ಚಳುವಳಿ ಮಾಡಿದರು. ಅದಕ್ಕೆ ರವೀಂದ್ರನಾಥ ಠಾಗೂರ್, ಅಂಬೇಡ್ಕರ್, ಜಗಜೀವನರಾಂ, ರಾಜಾಜಿ, ರಾಜೇಂದ್ರ ಪ್ರಸಾದ್ ಮುಂತಾದವರು ಬೆಂಬಲ ನೀಡಿದರು.

**ಭಾರತ ಬಿಟ್ಟು ತೊಲಗಿ**

1942 ಆಗಸ್ಟ್ 7 ಮತ್ತು 8 ರಂದು ಬಾಂಬೆಯಲ್ಲಿ ನಡೆದ ಎಐಸಿಸಿ ಸಮಾವೇಶದಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಬ್ರಿಟಿಷರೆ 'ಭಾರತ ಬಿಟ್ಟು ತೊಲಗಿ' ಎಂಬ ನಿರ್ಣಯ ಮಾಡಿತು. ಅದರ ನಾಯಕತ್ವವನ್ನು ಗಾಂಧಿಗೆ ನೀಡಿತು. ಕ್ವಿಟ್ ಇಂಡಿಯಾ ಚಳುವಳಿ ದೇಶದಾದ್ಯಂತ ತೀವ್ರವಾಗಿ ನಡೆದು ಬ್ರಿಟೀಷ್ ಆಡಳಿತದ ಅಂತ್ಯವನ್ನುಂಟುಮಾಡಿತು.

ಬ್ರಿಟೀಷರು ಭಾರತಕ್ಕೆ ಸ್ವಾತಂತ್ರ್ಯ ನೀಡುವಾಗ ದೇಶವನ್ನು ಇಬ್ಭಾಗ ಮಾಡಿ ಇಂಡಿಯಾ ಮತ್ತು ಪಾಕಿಸ್ಥಾನ ಮಾಡಿದರು. ಕೋಮುದಂಗೆಯಲ್ಲಿ ಹಿಂದೂ ಮುಸ್ಲಿಂರ ಮಾರಣ ಹೋಮವಾಯಿತು. 15 ಆಗಸ್ಟ್ 1947 ಸ್ವಾತಂತ್ರ್ಯ ಬಂದ ದಿನ ಗಾಂಧೀಜಿ ಕಲ್ಕತ್ತದ ಬೆಲಿಯಾ ಘಾಟ್‌ನಲ್ಲಿ ಸಂಜೆಯ ಪ್ರಾರ್ಥನಾ ಸಭೆ ಮಾಡಿದರು. ಹಿಂದೂ ಮುಸ್ಲಿಮರೊಡಗೂಡಿ 30 ಸಾವಿರ ಜನ ಭಾಗವಹಿಸಿದ್ದರು. ಅವರು ಅಲ್ಲಿ ಪಾದಯಾತ್ರೆ ಮಾಡಿ ಕೋಮುಗಲಭೆ ನಿಯಂತ್ರಿಸಿದರು.

**ಸಣ್ಣ ಮನಸ್ಸಿಗೆ ಮಹಾತ್ಮ ಒಪ್ಪಿಗಾಗೋದಿಲ್ಲ**

ಮಹಾತ್ಮಾ ಗಾಂಧಿಯವರ ಸ್ವಾತಂತ್ರ್ಯ ದೀಪ್ತಿಗೆ ಒಳಗಾದವರು ವರಕವಿ ದ.ರಾ.ಬೇಂದ್ರೆ. ಅವರು ಸ್ವಾತಂತ್ರ್ಯ ಬಂದ ಕೆಲವೇ ತಿಂಗಳಲ್ಲಿ ಗಾಂಧೀಜಿಯವರ ಹತ್ಯೆಯಾದ್ದರಿಂದ ತುಂಬಾ ದುಃಖಗೊಂಡು 'ಕೇಳಿರೊಂದು ಸೋಜಿಗ' ಕವನ ಬರೆದರು. ಗಾಂಧಿ ಮಹಾಧೀರ, ಅವನ ಪ್ರೇಮ ಶಿವನ ಪ್ರೇಮಕ್ಕೆ ಸಮಾನ, ಅವನು ಶಿವನ ಕಂದ ಎಂದು ವರ್ಣಿಸಿದರು. ಬಾಪು ಪ್ರಾಣಬಿಡುವಾಗ ಹೊಮ್ಮಿದ ರಾಮನಾಮವು ಅಬ್ಧ- ಮೋಡ ಎಂದು ಹೀಗೆ ನೊಂದು ನುಡಿದರು.

**ಅದರ ಧ್ವನಿಯು ಅಬ್ದವು**
**ಬಾನುಲಿಯೆ ಕಂಪಿಸಿ**
**ವಿಶ್ವವೆಲ್ಲ ಝೋಂಪಿಸಿ**
**ಏನನರ್ಥ ಏನನರ್ಥ**
**ಎಂದು ಕೂಗೆ ಕೂಗಿತು.**

ಬೇಂದ್ರೆಯವರು ರಚಿಸಿದ 1969 ರ ಗಾಂಧಿ ಶತಾಬ್ದಿಯ ಸ್ಮರಣೆಯ ಕವನ 'ಶಕಪುರುಷನ ಶತಮಾನ'. ಅದರಲ್ಲಿಯ ಕೆಲವು ಚಿಂತನಶೀಲ ನುಡಿಗಳು ಹೀಗಿವೆ.

**ನೀನು ರಾಮನ್ನ ನೆನಿಸಿ ರವಿ ಆದಿ**
**ನಾವು ರಾಮಾಯಣ ನೆನಸಿ ಕವಿ ಆದಿವಿ**
**ಇದು ಪವಾಡ, ಮನಮೋಹನದಾದ! ಶಕಪುರುಷ ನೀನು!!**

****

**ನಾವು ಏನ ಮರತರೂ**
**ನೀನು ಬಾಳಿದೀ ಅಂತ ನಾವು ಬದುಕಿದ್ದೀವಿ**
**ಇದನ್ನು ಮರಿಯೋ ಹಾಂಗಿಲ್ಲಾ.**

****

**ಇತಿಹಾಸ ಸಾರತದ ನೂರು ವರ್ಷಾತು ಮಗನ ಅಂತ**
**ಸಣ್ಣಕಣ್ಣಿಗೆ ದೊಡ್ಡ ಸೂರ್ಯ ಕಂಡಾನು**
**ಸಣ್ಣಮನಸ್ಸಿಗೆ ಮಹಾತ್ಮ್ಯ ಒಪ್ಪಿಗಾಗೋದಿಲ್ಲ.**

(ಇದು ನಭೋವಾಣಿ)

*******

(ಇದು ತಾ-2-10-2023 ರಂದು ಆಕಾಶವಾಣಿಯಲ್ಲಿ ಮಾತಾಡಿದ್ದು.)

ಕೃಪೆ: ಆಕಾಶವಾಣಿ

# ಗಾಂಧಿ ಮತ್ತು ಕರ್ನಾಟಕ

ಭಾಗ – 8

**ಗಾಂಧಿ ಮತ್ತು ಕರ್ನಾಟಕದ ನಡುವೆ ಒಂದು ಮಧುರ ಸಂಬಂಧವಿದೆ. ಕರ್ನಾಟಕದ ಜೊತೆಗಿನ ಗಾಂಧೀಜಿಯವರ ಒಡನಾಟ ಮತ್ತು ಸಂಬಂಧವನ್ನು ಇತ್ತೀಚಿನ ಪೀಳಿಗೆಯ ಓದುಗರಿಗೆ ತಲುಪಿಸುವ ಉದ್ದೇಶ ನಮ್ಮದು. ಅದಕ್ಕಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಸ್ಥೆಯ ಪ್ರಕಟಣೆಯಾದ "ಗಾಂಧಿ ಮತ್ತು ಕರ್ನಾಟಕ" ಕೃತಿಯನ್ನು ಸರಣಿ ಮಾದರಿಯಲ್ಲಿ ಪ್ರತಿ ತಿಂಗಳು ಬಾಪು ಪ್ರಪಂಚ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ.**



ಭಾರತದ ಸ್ವಾತಂತ್ರ್ಯ ಚಳವಳಿಗೆ ಕರ್ನಾಟಕದ ಕೊಡುಗೆ ಅಪಾರವಾದುದು,ಅದರಲ್ಲಿಯೂ ವಿದುರಾಶ್ವಥ ದುರಂತ, ಶಿವಪುರ ಧ್ವಜ ಸತ್ಯಾಗ್ರಹ ಹಾಗೂ 1982ರ ನಂತರದ (ಮೈಸೂರು ಚಲೋ ಚಳವಳಿಗಳು) ಕರ್ನಾಟಕದ ಕೊಡುಗೆಯೆಂದೇ ಭಾವಿಸುವ ಮಹತ್ವಪೂರ್ಣ ಘಟನೆಗಳಾಗಿ ಇತಿಹಾಸದಲ್ಲಿ ದಾಖಲಾಗಿವೆ . ಅದಲ್ಲದೆ ಗಾಂಧೀಜಿಯವರು ವಿಶ್ರಾಂತಿಗಾಗಿ ಕರ್ನಾಟಕದ ನಂದಿ ಗಿರಿಧಾಮವನ್ನು ಆಯ್ಕೆ ಮಾಡಿಕೊಂಡಿದ್ದು ಕರ್ನಾಟಕದ ಸುದೈವ. ಅಲ್ಲಿ ಅವರ ಆರೋಗ್ಯ ಸುಧಾರಿಸಿದ್ದು. ಗಾಂಧೀಜಿಯವರು ಕರ್ನಾಟಕಕ್ಕೆ 1915ರಿಂದ 1937ರ ಅವಧಿಯಲ್ಲಿ 19 ಸಲ ಆಗಮಿಸಿದ್ದಾರೆ. ಅವರು ಅಸಹಕಾರ ಆಂದೋಲನಕ್ಕಾಗಿ, ಖಾದಿ ಸ್ವದೇಶಿ ಆಂದೋಲನಕ್ಕಾಗಿ, ಕಾಂಗ್ರೆಸ್ ಅಧಿವೇಶನಕ್ಕಾಗಿ, ನಿಧಿ ಸಂಗ್ರಹಕ್ಕಾಗಿ, ಖಾದಿ ಪ್ರಚಾರಕ್ಕಾಗಿ, ಹರಿಜನ ನಿಧಿ ಸಂಗ್ರಹಕ್ಕಾಗಿ, ಹುದಲಿ ಸಮ್ಮೇಳನಕ್ಕಾಗಿ ಕರ್ನಾಟಕದ ನಾನಾ ಭಾಗಗಳಲ್ಲಿ ಪ್ರವಾಸ ಕೈಗೊಂಡಿದ್ದಾರೆ. ಈ ಎಲ್ಲಾ ದಾಖಲೆಗಳನ್ನು ಗಾಂಧೀಜಿಯವರೇ ಸ್ವತಃ ತಮ್ಮ ' ಹರಿಜನ ' ಮತ್ತು ' ಯಂಗ್ ಇಂಡಿಯಾ ' ಪತ್ರಿಕೆಗಳಲ್ಲಿ 1924, 1927, 1936, ಹಾಗೂ 1937ರ ಅವಧಿಯಲ್ಲಿ ಪ್ರಕಟಿಸಿದ್ದಾರೆ.

ಈ ಸಮಗ್ರ ದಾಖಲೆಗಳು ' ಗಾಂಧೀ ಮತ್ತು ಕರ್ನಾಟಕ ' ಕೃತಿಯಲ್ಲಿ ದಾಖಲಾಗಿವೆ. ಹಾಗೂ ಕರ್ನಾಟಕದ ಅಂದಿನ ಮುಂಚೂಣಿ ನಾಯಕರ ಪತ್ರ ವ್ಯವಹಾರಗಳು ಅಂದಿನ ಛಾಯಾಚಿತ್ರಗಳು ಸಹ ದಾಖಲಾಗಿವೆ. ಅಂದಿನ ಸ್ವಾತಂತ್ರ್ಯ ಹೋರಾಟಗಾರರ ನೆನಪುಗಳು ಕೂಡಾ ಈ ಕೃತಿಯಲ್ಲಿ ಸೇರ್ಪಡೆಯಾಗಿವೆ. ಅಲ್ಲದೆ ಕರ್ನಾಟಕಕ್ಕೆ ಗಾಂಧೀಜಿಯವರು ಬಂದಿದ್ದ ಹಾಗೂ ನಡೆದ ಘಟನೆಗಳ ಅವಲೋಕನವನ್ನು ಸ್ವಾತಂತ್ರ್ಯ ಹೋರಾಟಗಾರರು ತಮ್ಮ ನೆನಪಿನ ಬುತ್ತಿಯಿಂದ ತೆಗೆದಿಟ್ಟಿದ್ದಾರೆ. ಅವುಗಳೆಲ್ಲವನ್ನೂ ಸಿದ್ದವನಹಳ್ಳಿ ಕೃಷ್ಣಶರ್ಮರ ಮುಂದಾಳತ್ವದಲ್ಲಿ ಅಂದಿನ ಸಂಗ್ರಹಕಾರರು ಸಂಗ್ರಹಿಸಿದ್ದಾರೆ. ಕರ್ನಾಟಕದ 44 ಮಹನೀಯರು ತಮ್ಮ ನೆನಪುಗಳ ಬುತ್ತಿಯಿಂದ ಗಾಂಧೀಜಿಯವರ ಕರ್ನಾಟಕದ ಭೇಟಿಯಲ್ಲಿ ನಡೆದ ಘಟನೆಗಳನ್ನು ಸವಿಸ್ತಾರವಾಗಿ ದಾಖಲಿಸಲು ನೆರವಾಗಿದ್ದಾರೆ. ಅವರ ಮಾತುಗಳು ಇಂದಿಗೂ ಈ ಕೃತಿಯನ್ನು ಓದುವಾಗ ಒಂದು ಚಿತ್ರಣವನ್ನು ಓದುಗರ ಸ್ಮೃತಿಪಟಲದಲ್ಲಿ ಮೂಡಿಸುತ್ತವೆ.

**ವಿಜಾಪುರದಲ್ಲಿ (28–5–1921)**

ಮಹಾತ್ಮಾ ಗಾಂಧೀಯವರು ವಿಜಾಪುರಕ್ಕೆ ಬಂದಾಗ ಆಗಲೇ ಸಂಜೆಯಾಗಿತ್ತು . ಮೊದಲು ಒಂದು ಮಹಿಳೆಯರ ಸಭೆ ನಡೆಯಿತು. ಆಮೇಲೆ ತಾಸ್ಬಾವಡಿ ಮೈದಾನದಲ್ಲಿ ಸಾರ್ವಜನಿಕ ಸಭೆ ಸೇರಿತ್ತು. ಸುಮಾರು 12000 ಜನ ಸೇರಿದ್ದರು. ಘರ ಪರವಾಗಿಯೂ, ವರ್ತಕರ ಸಂಘದ ಪರವಾಗಿಯೂ ಬಿನ್ನವತ್ತಳೆಯನ್ನು ಅರ್ಪಿಸಿದರು. ಆ ಸಭೆಯಲ್ಲಿ ಶ್ರೀ ಶಾಬಾದಿ ಗುಂಡಪ್ಪನವರು ಮಾತನಾಡಲು ಅಭಿಲಾಷೆ ಪಟ್ಟರು. ಮಹಾತ್ಮರು ಅಪ್ಪಣೆ ಕೊಟ್ಟ ನಂತರ ಶ್ರೀ ಗುಂಡಪ್ಪನವರು ಮಾತನಾಡಿ ಬ್ರಾಹ್ಮಣರನ್ನು ಬಹಳವಾಗಿ ಟೀಕಿಸಿದರು. ಅನಂತರ ಗಾಂಧೀಜಿಯವರು ಮಾತನಾಡುತ್ತ:

"ಶ್ರೀ ಗುಂಡಪ್ಪನವರಿಗೆ ಮಾತನಾಡಲು ಅನುಮತಿ ಕೊಟ್ಟಿದ್ದು ನನಗೆ ಬಹಳ ಸಂತೋಷ. ನಮ್ಮ ವಿರೋಧಿಗಳ ಅಭಿಪ್ರಾಯವನ್ನು ತಾಳ್ಮೆಯಿಂದ ಕೇಳಿಕೊಳ್ಳುವುದು ನಮ್ಮ ಕರ್ತವ್ಯ. ಬ್ರಾಹ್ಮಣೇತರರ ಮನಸನ್ನು ನಾನು ಬಲ್ಲೆ. ಬ್ರಾಹ್ಮಣರಲ್ಲಿ ತಪ್ಪು ಇಲ್ಲ ಎನ್ನಲಾರೆ . ಬ್ರಾಹ್ಮಣರೂ ಕೂಡ ತಾವು ನಿಷ್ಕಳಂಕರೆಂದು ಹೇಳಿಕೊಳ್ಳುವುದಿಲ್ಲ. ತಮ್ಮ ಧರ್ಮದ ಭಾವನೆಗಳನ್ನು ಅವರು ಬಿಟ್ಟಿದ್ದಾರೆ. ಜೀವನ ಶುದ್ಧಿ ಹೋಗಿದೆ, ಒಂದು ಕಾಲಕ್ಕೆ ಅವರ ಸ್ಥಾನ ಬಹಳ ಮೇಲೆ ಇತ್ತು. ಆ ಸ್ಥಾನದಿಂದ ಇವತ್ತು ಕೆಳಗೆ ಬಿದ್ದಿದ್ದಾರೆ. ಅವರ ಪತನವೇ ಭಾರತದ ಪತನದ ಪ್ರಾರಂಭ. ನಾನೂ ಬ್ರಾಹ್ಮಣೇತರ. ಬ್ರಾಹ್ಮಣೇತರ ಬಂಧುಗಳಿಗೆ ನನ್ನ ಬಿನ್ನಹ ಇಷ್ಟು; ಇವತ್ತು ಬ್ರಾಹ್ಮಣರು ಪತಿತರು ಆಗಿದ್ದಾರೆ ಎಂದು ತಮ್ಮ ಧರ್ಮವನ್ನು, ಜೀವನದ ಆದರ್ಶಗಳನ್ನು ಅವರು ಮರೆಯಬಾರದು. ಬ್ರಾಹ್ಮಣರ ಈ ದೋಷಗಳನ್ನು ಅರಿತುಕೊಂಡು, ತಮ್ಮ ಹಕ್ಕುಗಳಿಗಾಗಿ ಹೊಡೆದಾಡಲು ಬ್ರಾಹ್ಮಣೇತರರು ಕಲಿತದ್ದೇ ಬ್ರಾಹ್ಮಣರಿಂದ , ಇದನ್ನು ಕೇಳಿ ಆಶ್ಚರ್ಯವೆನಿಸಬಹುದು ನಿಮಗೆ. ಬ್ರಾಹ್ಮಣರು ಎಷ್ಟೇ ಪತಿತರಾದರೂ ಇನ್ನೂ ಎಲ್ಲ ಚಳವಳಿಗೂ, ರಾಜಕೀಯವಾಗಲಿ ಸಾಮಾಜಿಕವಾಗಲಿ, ಅವರೇ ನಾಯಕರು. ಹಿಂದುಳಿದ ವರ್ಗದ ಉದ್ಧಾರಕ್ಕಾಗಿ ಮಾಡಿದ ಪ್ರಯತ್ನಗಳಲ್ಲಿ ಎಲ್ಲರಿಗಿಂತ ಅವರ ಪ್ರಯತ್ನವೇ ಹೆಚ್ಚು ಲೋಕಮಾನ್ಯರ ದೇಶಸೇವೆ ಸಮಸ್ತ ಜನಕ್ಕೂ ಮೆಚ್ಚುಗೆ ಆಗಿದೆ.

ಎಲ್ಲ ಕಾಲದಲ್ಲಿಯೂ ಸ್ವಾರ್ಥತ್ಯಾಗದಲ್ಲಿ ಬ್ರಾಹ್ಮಣರದೇ ಎತ್ತಿದ ಕೈ ಎಂದು ನನಗೆ ಮಂದಟ್ಟಾಗಿದೆ. ಬ್ರಾಹ್ಮಣ ನೌಕರಶಾಹಿ ಬಗ್ಗೆ ನೀವು ದೂರುತ್ತೀರಿ. ಬ್ರಿಟಿಷ್ ನೌಕರಶಾಹಿಯ ಸಂಗಡ ಅದನ್ನು ಹೋಲಿಸಿ ನೋಡೋಣ. ಅವರು ನಮ್ಮನ್ನು ವಿಭಜಿಸಿ ಆಳುತ್ತಾರೆ; ತಮ್ಮ ಅಧಿಕಾರವನ್ನು ಖಡ್ಗಬಲದಿಂದ ಉಳಿಸಿಕೊಂಡಿದ್ದಾರೆ. ಬ್ರಾಹ್ಮಣರು ಹಾಗೆ ಎಂದೂ ಮಾಡಲಿಲ್ಲ. ಅವರು ದೇಹಬಲವನ್ನು ಎಂದೂ ಉಪಯೋಗಿಸಲಿಲ್ಲ. ತಮ್ಮ ಬುದ್ಧಿಬಲದಿಂದ, ತಪೋಬಲದಿಂದ, ತ್ಯಾಗಬಲದಿಂದ ತಮ್ಮ ಅದಿಪತ್ಯವನ್ನು ಸ್ಥಾಪಿಸಿಕೊಂಡಿದ್ದಾರೆ. ಅವರ ಹೆಚ್ಚುಗಾರಿಕೆಗೆ ನಾವು ಅಸೂಯೆ ಪಡಬೇಕಾದ್ದಿಲ್ಲ. ಬ್ರಾಹ್ಮಣರನ್ನು ದ್ವೇಷಿಸಬೇಡಿ. ನೌಕರಶಾಹಿಯ ಬಲೆಗೆ ಸಿಕ್ಕಬೇಡಿ ಎಂದು ನನ್ನ ಬ್ರಾಹ್ಮಣೇತರ ಬಂಧುಗಳಿಗೆ ವಿನಂತಿ ಮಾಡಿಕೊಳ್ಳುತ್ತೇನೆ. ಬ್ರಾಹ್ಮಣೇತರರು ಶ್ರೀಮಂತರು. ವ್ಯವಸಾಯ ವ್ಯಾಪಾರ ಎರಡೂ ಅವರ ಕೈಲಿದೆ. ಅವರಿಗೂ ನೌಕರಿಗಳು ಬೇಕು ಎಂದರೆ ಅಸಹಕಾರ ಅವರಿಗೆ ಹಾದಿ ಮಾಡಿಕೊಡುತ್ತದೆ. ಅಸಹಕಾರ ಬ್ರಾಹ್ಮಣರಿಗೂ, ಬ್ರಾಹ್ಮಣೇತರರಿಗೂ ಎಲ್ಲರಿಗೂ ಹಿತಕರ. ಶಾಲಾ ಕಾಲೇಜುಗಳ ಬಹಿಷ್ಕಾರ ವಿದ್ಯಾವಂತ ಬ್ರಾಹ್ಮಣರಿಗೆ ಸಮ್ಮತ ಆಗಬಹುದು. ಆದರೆ ಬ್ರಾಹ್ಮಣೇತರರು ಇನ್ನೂ ವಿದ್ಯೆ ಕಲಿತಿಲ್ಲ .ಅವರಿಗೆ ಖಂಡಿತವಾಗಿಯೂ ಇದರಿಂದ ಹಾನಿ ತಟ್ಟುತ್ತದೆ ಎನ್ನುತ್ತೀರಿ. ಆಧುನಿಕ ಶಿಕ್ಷಣದ ಬಹಳ ಉತ್ತಮಫಲ ನಾನು ಎಂದೂ ಹೇಳುತ್ತೀರಿ. ಆದರೆ ಆಧುನಿಕ ಶಿಕ್ಷಣ ನಮ್ಮನ್ನು ಹೇಡಿಗಳನ್ನಾಗಿ ಮಾಡಿದೆ ಎನ್ನುತ್ತೇನೆ . ನಮ್ಮ ನಿಸ್ಸಹಾಯಕತೆ , ನಮ್ಮ ಪರಸ್ಪರ ಈರ್ಷ– ಸೂಡಿ ಈ ಶಿಕ್ಷಣದ ಫಲ. ಇದು ನಮ್ಮಲ್ಲಿ ಗುಲಾಮಗಿರಿ ವೃತ್ತಿಯನ್ನು ತಂದಿದೆ. ನನ್ನಲ್ಲಿ ಇವೆ ಎಂದು ನೀವು ಹೇಳುವ ಗುಣಗಳು ಖಂಡಿತವಾಗಿಯೂ ಆಧುನಿಕ ಶಿಕ್ಷಣದ ಫಲ ಅಲ್ಲ. ಬಹಳಕಾಲದ ಹಿಂದೆಯೇ ಈ ಶಿಕ್ಷಣದ ಮೋಡಿಯಿಂದ ನಾನು ಬಿಡಿಸಿಕೊಂಡಿದ್ದೇನೆ. ನನ್ನ ಧರ್ಮದ ಅಧ್ಯಯನ, ಜೀವನದ ಶಾಶ್ವತ ತತ್ವಗಳ ಅಧ್ಯಯನ, ಬ್ರಾಹ್ಮಣರಿಂದ ಸಂಕಲಿತವಾದ ಭಗವದ್ಗೀತೆ, ಮಹಾಭಾರತ, ರಾಮಾಯಣಗಳ ಅಧ್ಯಯನದಿಂದ ನನ್ನ ವ್ಯಕ್ತಿತ್ವ ರೂಪುಗೊಂಡಿದೆ. ಈ ವಿಚಾರಗಳನ್ನು ಸಾವಧಾನವಾಗಿ ಚಿಂತನ ಮಾಡಬೇಕು ಎಂದು ನನ್ನ ಬ್ರಾಹ್ಮಣೇತರ ಗೆಳೆಯರನ್ನು ಕೇಳಿಕೊಳ್ಳುತ್ತೇನೆ. ಆಗ ಅವರಿಗೆ ನಾನು ಹೇಳುವುದರ ಸತ್ಯ ಮನದಟ್ಟಾಗುವುದು.

ನಾನೂ, ಆಲಿ ಸೋದರರೂ ಅಣ್ಣ–ತಮ್ಮಂದಿರ ಹಾಗೆ ಬಾಳುತ್ತಿದ್ದೇವೆ. ಹಿಂದು ಮುಸಲ್ಮಾನರು ಇಬ್ಬರೂ ಅದೇ ರೀತಿ ಜೊತೆಯಾಗಿ ಬಾಳಬೇಕೆಂದು ನನ್ನ ಬಿನ್ನಹ. ಸಹಕಾರದ ಚಳವಳಿ ಆತ್ಮಶುದ್ಧಿಯ ಚಳವಳಿ. ನಮ್ಮ ಸಮಾಜಕ್ಕೆ ಗೆದ್ದಲು ಹತ್ತಿದಂತೆ ಹತ್ತಿರುವ ದುರ್ಗುಣಗಳನ್ನು ಜನರು ತೊಲಗಿಸಬೇಕು. ದೇಶಕ್ಕಾಗಿ ಪ್ರಾಣತ್ಯಾಗ ಮಾಡಲು ಸಿದ್ಧರಾಗಬೇಕು. ಏನೇ ಬರಲಿ, ಅಹಿಂಸೆಯನ್ನು ಬಿಡಬಾರದು.

ಈ ಜಿಲ್ಲೆ ಕ್ಷಾಮಪೀಡಿತ ಎಂದು ನನಗೆ ದುಃಖ ಆಗುತ್ತದೆ. ಸಹಜವಾಗಿಯೇ ತಿಲಕ ಸ್ವರಾಜ್ಯ ನಿಧಿಗೆ ನೀವು ಧಾರಾಳವಾಗಿ ದೇಣಿಗೆ ನೀಡಲು ಆಗಿಲ್ಲ. ಇಡೀ ಜಿಲ್ಲೆಯಲ್ಲಿ 1400 ರಾಟೆ ಮಾತ್ರ ತಿರುಗುತ್ತಿವೆ ಎಂದು ಕೇಳಿ ನನಗೆ ವಿಷಾದ ಎನಿಸುತ್ತಿದೆ. ರಾಟೆ ಬರಗಾಲಕ್ಕೆ ಒಂದು ವಿಮೆ ಮಾಡಿದಂತೆ. ಇಲ್ಲಿ ನೂರಕ್ಕೆ 87 ಜನ ವ್ಯವಸಾಯವನ್ನು ಅವಲಂಬಿಸಿದ್ದೀರಿ. ಅಭಾವದ ಸಮಯಕ್ಕೆ ಬೇರೆ ಯಾವ ಬದುಕು ಇಲ್ಲ. ಆದ್ದರಿಂದ ಮನೆ ಮನೆಯಲ್ಲೂ ರಾಟೆ ತಿರುಗುವಂತೆ ಮಾಡಬೇಕು. ಹಾಗೆ ಮಾಡಿದರೆ ಸ್ವದೇಶಿಯೂ ಬೆಳೆಯುತ್ತದೆ, ಪರದೇಶಿ ವಸ್ತ್ರ ಬಹಿಷ್ಕಾರವೂ ಆಗುತ್ತದೆ. ಬ್ರಾಹ್ಮಣ ಬ್ರಾಹ್ಮಣೇತರರ ಕಲಹವನ್ನು ಅಹಿಂಸೆಯಿಂದ ಪರಿಹಾರ ಮಾಡಿಕೊಳ್ಳಲು ನಿರ್ಧಾರ ಮಾಡಿದರೆ. ಹಿಂದೂ ಮುಸಲ್ಮಾನರಿಬ್ಬರೂ ಪರಸ್ಪರ ಪ್ರೀತಿಯಿಂದ ನಡೆದುಕೊಂಡರೆ, ಪ್ರತಿಯೊಂದು ಮನೆಯಲ್ಲಿಯೂ ರಾಟೆ ತಿರುಗಿದರೆ ಈ ವರ್ಷದೊಳಗಾಗಿಯೇ ಸ್ವರಾಜ್ಯ ಸ್ಥಾಪನೆ ಆಗುತ್ತದೆ ಎಂದು ಭರವಸೆ ಕೊಡುತ್ತೇನೆ.

ಲೋಕಮಾನ್ಯ ತಿಲಕರು "ಸ್ವರಾಜ್ಯ ನಮ್ಮ ಜನ್ಮಸಿದ್ಧ ಹಕ್ಕು' ಎಂದು ಹೇಳಿಕೊಟ್ಟಿದ್ದಾರೆ. ಈ ಮಂತ್ರವನ್ನು ಬಳಸಲು ನಾವು ಶಾಸನಸಭೆಗೆ ಹೋಗಬೇಕಾದ್ದಿಲ್ಲ. ರಾಟೆ ನಮಗೆ ಬೇಕಾದ ಸ್ವರಾಜ್ಯವನ್ನು ಕೊಡುತ್ತದೆ. ಜೂನ್ 30ರ ಒಳಗಾಗಿ ಒಂದು ಕೋಟಿ ರೂಪಾಯಿಯನ್ನು ಜನರು ಸಂಗ್ರಹಿಸಬೇಕು. ಲೋಕಮಾನ್ಯ ತಿಲಕರ




ಹೆಸರಿನಲ್ಲಿ ಒಂದು ಕೋಟಿ ರೂಪಾಯಿಯನ್ನು ಸಂಗ್ರಹಿಸುವುದು ಕಷ್ಟವೇನಲ್ಲ ಎನಿಸುತ್ತದೆ ನನಗೆ. ನನಗೆ ಬಿನ್ನವತ್ತಳೆ ಕೊಟ್ಟು ಗೌರವ ತೋರಿಸಿದ್ದೀರಿ. ಪೌರಸಭೆಯವರೂ, ವರ್ತಕರೂ ತಮ್ಮ ಕರ್ತವ್ಯವನ್ನು ಅರಿತು ಕೊಂಡರೆ , ಸ್ವರಾಜ್ಯ ಸಾಧನೆಗೆ ಸಾಕಷ್ಟು ಸಹಾಯ ಮಾಡಬಹುದು. ಖಿಲಾಫತ್ ಅನ್ಯಾಯಗಳನ್ನು ತೊಡೆದು ನ್ಯಾಯ ದೊರಕಿಸಿಕೊಳ್ಳಲು ಸಹಾಯ ಮಾಡಬಹುದು.

**ಧಾರವಾಡದಲ್ಲಿ ಗೋಲಿಬಾರು (1–7–1921)**

ಧಾರವಾಡದಲ್ಲಿ 1–7–1921ರಂದು ಹೆಂಡದ ಗಡಂಗದ ಮುಂದೆ ಪಿಕೆಟಿಂಗ್ ನಡೆದಿತ್ತು. ಅಂದಿನ ಕಾಂಗ್ರೆಸ್ ಕಾರ್ಯಕ್ರಮದ ಪ್ರಕಾರ ಈ ಪಿಕೆಟಿಂಗ್ ನಡೆದಾಗ ಪೊಲೀಸ್ ಅಧಿಕಾರಿಗಳು ಗುಂಡು ಹಾರಿಸಿದ ಪರಿಣಾಮವಾಗಿ ಮೂರು ಜನರು ಅಸು ನೀಗಿದರು. ಈ ಪ್ರಕರಣದಲ್ಲಿ ಧಾರವಾಡದ ಅನೇಕ ಕಾಂಗ್ರೆಸ್ ಕಾರ್ಯಕರ್ತರನ್ನು ಸುಳ್ಳು ಆರೋಪಗಳ ಮೇಲೆ ಸರಕಾರ ಬಂಧಿಸಿತು. ಹೀಗೆ ಬಂಧಿತರಾದವವರಲ್ಲಿ ಸರ್ವಶ್ರೀ ಗೋಪಾಳರಾವ ದೇಶಪಾಂಡೆ, ಹುನುಮಂತರಾವ ದೇಸಾಯಿ, ರಂಗರಾವ ದಿವಾಕರ, ಕೃಷ್ಣರಾವ ಮುದವೇಡಕರ, ವೆಂಕಟರಾವ ಮುದವೇಡಕರ, ಗೋವಿಂದಾಚಾರ್ಯ ಗುತ್ತಲ ವಕೀಲ, ಮಧ್ವರಾವ ಕಬ್ಬೂರ ವಕೀಲ, ಅನಂತರಾವ ದಾಬಡೆ, ನಾರಾಯಣ ರಾವ ಭಿಸೆ ಇವರೇ ಮೊದಲಾದವರು ಇದ್ದರು. ಬಂಧಿತರಾದ ಕೆಲಜನ ಮುಸಲ್ಮಾನ ಬಂಧುಗಳೂ ಇದ್ದರು. ಇವರೆಲ್ಲರ ಮೇಲೂ ಮೊಕದ್ದಮೆ ನಡೆಯಿತು. ಆಗ ದಕ್ಷಿಣ ಭಾಗದ ಕಮಿಶನರ್ ಮತ್ತು ಮುಂಬಯಿ ಸರಕಾರದ ಹೋಂ ಮೆಂಬರ್ ಧಾರವಾಡಕ್ಕೆ ಬಂದು ವಿಚಾರಣೆ ಮಾಡಿಕೊಂಡು ಹೋದರು. ಪದ್ಧತಿಯಂತೆ ಮ್ಯಾಜಿಸ್ಟ್ರೇಟರ ಮುಂದೆ ವಿಚಾರಣೆ ಆಗಿ ಮೊಕದ್ದಮೆ ಸೆಷನ್ ಕೋರ್ಟಿಗೆ ಕಮಿಟ್ ಮಾಡಲಾಯಿತು. ಆರೋಪಿಗಳು, ಗಾಂಧೀಜಿ ತತ್ವಕ್ಕೆ ಅನುಗುಣವಾಗಿ, ಮೊಕದ್ದಮೆಯಲ್ಲಿ ಭಾಗವಹಿಸಲು ನಿರಾಕರಿಸಿದರು. ಅವರು ಕೇವಲ ತಮ್ಮ ಹೇಳಿಕೆ ಕೊಡುವುದಕ್ಕಿಂತ ಹೆಚ್ಚಿನದೇನನ್ನೂ ಮಾಡಲಿಲ್ಲ.

ಮುಂಬಯಿ ಎ.ಐ.ಸಿ.ಸಿ ಸಭೆಯಲ್ಲಿ ಧಾರವಾಡ ಗೋಲಿಬಾರ್ ಪ್ರಶ್ನೆ ಬಂದು ಕಾಂಗ್ರೆಸ್ ಪರವಾಗಿ ಈ ಪ್ರಕರಣದ ವಿಚಾರಣೆ ನಡೆಯಬೇಕೆಂದು ನಿರ್ಣಯವಾಯಿತು. ಅದರಂತೆ, ಅಬ್ಬಾಸ್ ತಯ್ಯಬ್ಜಿ ಅವರ ನೇತೃತ್ವದಲ್ಲಿ ಒಂದು ವಿಚಾರಣಾ ಸಮಿತಿ ಏರ್ಪಟ್ಟಿತು. ಮುಖಂಡರಲ್ಲಿ ಯಾರಾದರೂ ಧಾರವಾಡಕ್ಕೆ ಹೋಗಿ ಬಂಧನದಲ್ಲಿದ್ದ "ಆರೋಪಿಗಳನ್ನು ಕಂಡುಬಂದರೆ, ಅವರಿಗೆಲ್ಲ ಸಮಾಧಾನವಾಗುವದೆಂದು ಗಾಂಧೀಜಿ ಹೇಳಿದ್ದರಿಂದ ಲಾಲಾ ಲಜಪತರಾಯ ಮತ್ತು ಶೌಕತ್ ಆಲಿ ಧಾರವಾಡಕ್ಕೆ ಬಂದರು. ಇವರ ಸಂಗಡ ದೇಶಪಾಂಡೆ ಗಂಗಾಧರ ರಾಯರು ಸಹ ಇದ್ದರು. ಲಾಲಾಜಿ ಮತ್ತು ಶೌಕತ್ ಆಲಿ ಅವರು ಆರೋಪಿಗಳ ಸಂಗಡ ಮಾತನಾಡಬಾರದೆಂಬ ಕರಾರಿನ ಮೇಲೆ ಅವರಿಗೆ ಗೋಲಿಬಾರ್ ಪ್ರಕರಣದ ರಾಜಕೀಯ ಆರೋಪಿಗಳನ್ನು ಕಾಣಲು ಅನುಮತಿ ದೊರೆತಿತ್ತು. ಇದರಿಂದ ಆರೋಪಿಗಳಿಗೆಲ್ಲ ಸಮಾಧಾನ ಆಯಿತು. ಸೆಶನ್ಸ್ ಕೋರ್ಟಿನಲ್ಲಿ ಈ ಮೊಕದ್ದಮೆಯ ತೀರ್ಮಾನ ಹೊರಬಿದ್ದು ದಿವಾಕರ, ಗೋಪಾಳರಾವ ದೇಶಪಾಂಡೆ, ಕೃಷ್ಣರಾವ ಮುದವೇಡಕರ, ಹನುಮಂತರಾವ ದೇಸಾಯಿ ಇವರು ದೋಷಮುಕ್ತರಾದರು. ಉಳಿದವರಿಗೆ ಒಂದು ವರ್ಷದಿಂದ ಮೂರು ವರ್ಷಗಳವರೆಗೆ ಸಶ್ರಮ ಶಿಕ್ಷೆ ಆಯಿತು. ಆಗ ಶ್ರೀ ವಿನಾಯಕರಾವ ಜೋಶಿ ಅವರ ನಿವೃತ್ತಿ ವೇತನವನ್ನು ಸರಕಾರ ನಿಲ್ಲಿಸಿ ಬಿಟ್ಟಿತು. ಇನ್ನು ಕಾಂಗ್ರೆಸ್ ನೇಮಿಸಿದ್ದ ವಿಚಾರಣಾ ಸಮಿತಿಯು ಸಾಕ್ಷ್ಯ ತೆಗೆದುಕೊಂಡು ಗೋಲಿಬಾರ್ ಮಾಡಲು ಏನೂ ಕಾರಣ ಇರಲಿಲ್ಲ ಎಂದು ವರದಿ ಮಾಡಿತು.

**ಗಾಂಧೀಜಿಯ ಭೇಟಿ, 1915–1921**

ಈ ಗೋಲಿಬಾರ್ ಪ್ರಕರಣದ ಸಂಬಂಧದಲ್ಲಿ ಗಾಂಧೀಜಿ 14–7–1921ರಲ್ಲಿ ಒಂದು ಸಂದೇಶ ಕಳಿಸಿದ್ದು ಅದು ಹೀಗಿದೆ: ಧಾರವಾಡದಲ್ಲಿ ಸರಕಾರ ಮಾಡುತ್ತಿರುವ ಕೆಲಸವನ್ನು ಅತ್ಯಂತ





ಆಸಕ್ತಿಯಿಂದ ನಾನು ಗಮನಿಸುತ್ತಿದ್ದೇನೆ. ಸರಕಾರದ ದಬ್ಬಾಳಿಕೆಗೆ ಗುರಿಯಾದವರ ಬಳಗದವರಿಗೆ ನನ್ನ ಅಭಿನಂದನೆಗಳು. ಒಟ್ಟಿನಲ್ಲಿ ಜನತೆಯನ್ನೇ ನಾನು ಅಭಿನಂದಿಸುತ್ತೇನೆ

ಅವರ ಧೈರ್ಯ ಸ್ಥೈರ್ಯ ಸಹನೆಗಳಿಗೆ ಅಭಿನಂದಿಸುತ್ತೇನೆ. ಅಲ್ಲಿ ದಸ್ತಗಿರಿಗಳಿಂದ ಧಾರವಾಡದ ಜನರ ನೀತಿ ಸ್ವಲವೂ ಕೆಡಲಿಲ್ಲವೆಂದು ಕೇಳಿ ನನಗೆ ಸಂತೋಷವಾಗಿದೆ. ಧಾರವಾಡದಲ್ಲಿ ನಡೆದ ಘಟನೆಯಂಥ ಘಟನೆಗಳಿಂದ ಸ್ವರಾಜ್ಯಕ್ಕೆ ನಮ್ಮ ದಾರಿ ಹತ್ತಿರವಾಗುತ್ತದೆ. ಆದರೆ ಅಹಿಂಸೆಯನ್ನೂ, ಸಹನೆಯನ್ನೂ ನಾವು ಕಾಯ್ದುಕೊಳ್ಳಬೇಕು. ಉದ್ದೇಶಪೂರ್ವಕ ಮಾಡಿದ ಪ್ರತಿಭಟನೆ ಜನರ ಧೈರ್ಯವನ್ನೂ ಇಮ್ಮಡಿಗೊಳಿಸುತ್ತದೆ. ಅವರ ಚಳವಳಿಗೆ ಹೆಚ್ಚು ಪವಿತ್ರತೆಯನ್ನು ತರುತ್ತದೆ. ಆದ್ದರಿಂದ ಸರ್ಕಾರದ ದಬ್ಬಾಳಿಕೆ ಎಷ್ಟೇ ಆದರೂ ನಾವು ಸಹಿಸಿಕೊಂಡು, ಧೈರ್ಯಗೆಡದೆ ನಮ್ಮ ಗುರಿಯ ಕಡೆಗೆ ಹೋಗಬೇಕು.

ಧಾರವಾಡದ ಸಮಸ್ಯೆ ಸ್ಥಳೀಯ ಕಲಹಗಳಿಂದ, ವಿವಾದಗಳಿಂದ ತೊಡಕಾಗಿ ಗೊಂದಲಗೆಟ್ಟಿದೆ ಎಂದು ಕೇಳಿದ್ದೇನೆ. ಎಲ್ಲರಿಗೂ ಸಮಾನ ಆದ ವಿಪತ್ತು ಇದು. ಎಲ್ಲರೂ ತಮ್ಮ ತಮ್ಮ ಜಗಳಗಳನ್ನು ಮರೆಯಬೇಕು ಎಂದು ಬೇಡುತ್ತೇನೆ. ಎಲ್ಲರೂ ಈ ಮಾತಿನಂತೆ ನಡೆಯಲಿ, ನಡೆಯದಿರಲಿ, ಅಸಹಕಾರಿಗಳಾದರೂ ಖಂಡಿತ ಹೀಗೆಯೆ. ಮಾಡಿಯಾರು ಎಂದು ನಿರೀಕ್ಷಿಸುತ್ತೇನೆ. ಅಸೂಯೆ ಪಡುವವರು ಎಷ್ಟೇ ದ್ವೇಷ ಮಾಡಿದರೂ ಶಾಂತವಾಗಿ ಅದನ್ನು ಸಹಿಸುವುದರಿಂದ ವಿರೋಧಿಗಳ ಬಲ ಕುಗ್ಗುತ್ತದೆ. ವಿರೋಧಿಗಳನ್ನು ಗೆಲ್ಲಲು ಪ್ರೀತಿ ಔದಾರ್ಯಗಳಿಗಿಂತ ಹೆಚ್ಚಿನ ಮಾರ್ಗ ಇಲ್ಲ .1921 ಜುಲೈ ತಿಂಗಳು ನವಲಗುಂದದಲ್ಲಿ ಧಾರವಾಡ ಜಿಲ್ಲಾ ಪರಿಷತ್ತು ಕೂಡಿತ್ತು. ಅದಕ್ಕೆ ಅಧ್ಯಕ್ಷರು ಗಂಗಾಧರರಾವ ದೇಶಪಾಂಡೆ ಅವರು. ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ, ಅಹಿಂಸಾತ್ಮಕ ಅಸಹಕಾರವೇ ಉತ್ತಮ ಉಪಾಯವಾದರೂ ಕರನಿರಾಕರಣ ಚಳವಳಿ ನಡೆಸುವ ಪ್ರಸಂಗ, ಬಂದರೂ ಬರಬಹುದು ಎಂದು ಹೇಳಿದ್ದರು. ಅಲ್ಲದೆ, ಧಾರವಾಡ ಗೋಲಿಬಾರ್ ಪ್ರಸಂಗ ಉಲ್ಲೇಖಿಸಿ ಧಾರವಾಡ ಕಲೆಕ್ಟರ್ ಪೇಂಟರ್ ಅವರನ್ನು ಟೀಕಿಸಿದ್ದರು. ಈ ಸಂಬಂಧವಾಗಿ ಅವರ ಮೇಲೆ 124 ಎ ಕಲಮಿನಂತೆ ರಾಜದ್ರೋಹ ಮೊಕದ್ದಮೆ ಹಾಕಲಾಯಿತು, ಮತ್ತು ಇದರಲ್ಲಿ ಅವರಿಗೆ ಆರು ತಿಂಗಳು ಶಿಕ್ಷೆ ಆಯಿತು. ಈ ಸಂಬಂಧದಲ್ಲಿ ಗಾಂಧೀಜಿ ಶ್ರೀ ಗಂಗಾಧರರಾಯರಿಗೆ ಒಂದು ಪತ್ರ ಬರೆದರು. ಆ ಪತ್ರವನ್ನು ಅಕ್ಟೋಬರ್ 15 ರ ದಿನ ಹುಬ್ಬಳ್ಳಿಯಲ್ಲಿ ನಡೆದ ಒಂದು ಸಾರ್ವಜನಿಕ ಸಭೆಯಲ್ಲಿ ಶ್ರೀ ದಿವಾಕರ ರಂಗರಾಯರು ಓದಿದರು. ದಿವಾಕರರೂ ಕೂಡ ಅದೇ ಒಂದು ವಾರದ ಹಿಂದೆ ಸೆರೆಮನೆಯಿಂದ ಬಿಡುಗಡೆ ಆಗಿ ಬಂದಿದ್ದರು.

**ಆ ಪತ್ರ ಹೀಗಿದೆ:**

ಪ್ರಿಯ ಗಂಗಾಧರರಾಯರೆ, ಸೆರೆಮನೆಯ ಬಹುಮಾನವನ್ನು ಪಡೆಯುವ ಸುಪ್ರಸಂಗ ನಿಮಗೆ ಈಗ ಬಂದಿದೆ ಎಂದು ಕೇಳಿದೆ. ಅಂಥ ಸುದೈವ ನನ್ನ ಪಾಲಿಗೆ. ಬರಲಿಲ್ಲವಲ್ಲ ಎಂದು ನನಗೆ ಅಸೂಯೆ ಆಗುತ್ತದೆ. ಹೆಚ್ಚು ಹೆಚ್ಚು ಸೆರೆಮನೆಗೆ ಹೋದಂತೆ, ಹಿಂದೆ ಉಳಿದವರ ಮೇಲೆ ಹೆಚ್ಚು ಹೆಚ್ಚು ಭಾರವೂ, ಹೆಚ್ಚು ಹೆಚ್ಚು ಜವಾಬ್ದಾರಿಯೂ ಬೀಳುತ್ತದೆ ನಿಜ. ಆದರೆ ಸಮಸ್ತ ಭಾರವನ್ನು ಹೊರಲು ಸರ್ವಶಕ್ತ ಭಗವಂತ ಸಮರ್ಥ. ಅವನಿಗೆ ಈ ಭಾರ ಹೊರಿಸಿ, ನಾವು ನಿಶ್ಚಿಂತರಾದರಾಯಿತು. ಸೆರೆಮನೆಯಲ್ಲಿ ಕೂಡ ರಾಟೆಯನ್ನು ತರಿಸಿಕೊಳ್ಳುವ ಬಗ್ಗೆ ತಾವು ಒತ್ತಾಯ ಮಾಡಿಯೇ ಮಾಡುತ್ತೀರಿ ಎಂದು ನಾ ಬಲ್ಲೆ. ಆಗಲಿ, ಈ ವರ್ಷ ಕೊನೆ ಮುಟ್ಟಿದ ಮೇಲೆ ಸೆರೆಮನೆಯಲ್ಲಿ ಇರುವ, ವಿಶ್ರಾಂತಿ ಸಂತೋಷವನ್ನನುಭವಿಸುವ ಅವಕಾಶ ನಿಮಗೆ ನಾವು ಕೊಡುವುದಿಲ್ಲವೆಂದು ಖಂಡಿತವಾಗಿ ನಂಬಿ.

■









# ಐತಿಹಾಸಿಕ ಬೆಳಗಾವಿಯ ಕಾಂಗ್ರೆಸ್ ಮಹಾ ಅಧಿವೇಶನ (1924)

– ಶೈಲಜಾ ಹಿರೇಮಠ.

ಇಂದಿಗೆ 99 ವರ್ಷಗಳ ಹಿಂದೆ ಅಂದರೆ ಇದೇ ದಿನ,

1924 ನೇ ಇಸ್ವಿ ಡಿಸೆಂಬರ್ ತಿಂಗಳ 26 ಮತ್ತು 27 ನೇ ತಾರೀಖನಂದು 2 ದಿನಗಳ ಕಾಲ ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿ ನೇತಾರ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ನೇತೃತ್ವದಲ್ಲಿ ನಮ್ಮ ಬೆಳಗಾವಿಯಲ್ಲಿ ರಾಷ್ಟ್ರೀಯ ಕಾಂಗ್ರೆಸ್‌ನ 39ನೇ ಮಹಾಅಧಿವೇಶನ ಜರುಗಿತು.

ಆ ಸವಿನೆನಪಿಗಾಗಿ ಈ ಲೇಖನ..

ಕುಂದಾನಗರಿ ಬೆಳಗಾವಿ ಹಲವು ಐತಿಹಾಸಿಕ ಕ್ಷಣಗಳಿಗೆ ಸಾಕ್ಷಿಯಾದ ನಗರ. ಮಹಾತ್ಮ ಗಾಂಧೀಜಿಯವರ ಏಕಮಾತ್ರ ಅಧ್ಯಕ್ಷತೆಯಲ್ಲಿ ನಡೆದಿದ್ದ 39 ನೇ ಕಾಂಗ್ರೆಸ್ ನ ಮಹಾ ಅಧಿವೇಶನ ಬೆಳಗಾವಿ ನಗರದಲ್ಲಿ ಜರುಗಿತ್ತು. ಇಡೀ ಇತಿಹಾಸದ ಪುಟಗಳಲ್ಲಿ ಬಾಪೂಜಿ ಇದೊಂದೇ ಅವಧಿಗೆ ಮಾತ್ರ ಅಧ್ಯಕ್ಷರಾಗಿದ್ದರು. ಮತ್ತೇ ಅವರು ಅಧ್ಯಕ್ಷರಾಗಲಿಲ್ಲ. ಮಹಾತ್ಮ ಗಾಂಧೀಜಿಯವರು ಅಧಿಕೃತವಾಗಿ ಕಾಂಗ್ರೆಸ್ ಪಕ್ಷಕ್ಕೆ ಪ್ರವೇಶ ಮಾಡುವ ಮುನ್ನ ಕಾಂಗ್ರೆಸ್ ಪಕ್ಷ ಕೇವಲ ಒಂದು ರಾಜಕೀಯ ಪಕ್ಷವಾಗಿತ್ತು.

ಆದರೆ ಗಾಂಧೀಜಿಯವರು ಅಧ್ಯಕ್ಷರಾದ ಮೇಲೆ ದೇಶದ ಒಗ್ಗಟ್ಟಿನ ಮಂತ್ರಕ್ಕೆ ಸ್ವಾತಂತ್ರ್ಯ ಹೋರಾಟಕ್ಕೆ ಸಮಾಜ ಸುಧಾರಣೆಯ ಅಂಶಗಳನ್ನು ಪಕ್ಷದ ಅಜೆಂಡಾದಲ್ಲಿ ಅಳವಡಿಸಿ, ಸರ್ವೋದಯ ತತ್ವದಡಿಯಲ್ಲಿ ಇಡೀ ದೇಶದ ಜನರನ್ನು ಒಗ್ಗೂಡಿಸಿ, ಸ್ವಾತಂತ್ರ್ಯ ಚಳವಳಿಯನ್ನು ರಾಷ್ಟ್ರೀಕರಣಗೊಳಿಸಿದರು. ಮಹಾತ್ಮನ ಅವಧಿಯಲ್ಲಿಯೇ ಕಾಂಗ್ರೆಸ್ ಕೀರ್ತಿ ದೇಶವ್ಯಾಪಿ ಹಬ್ಬಿತು.






ಪುಣ್ಯ ಪುರುಷ ಮಹಾತ್ಮ ಗಾಂಧೀಜಿಯವರು ಬೆಳಗಾವಿ ಮಣ್ಣನ್ನು ಸ್ಪರ್ಶಿಸಿದ್ದು ಐತಿಹಾಸಿಕ ಗಳಿಗೆಯೆಂದೇ ಹೇಳಬಹುದು. ಆ ಸಂದರ್ಭದಲ್ಲಿ ಕೇವಲ 30 ಸಾವಿರ ಜನಸಂಖ್ಯೆ ಇದ್ದ ಸಣ್ಣ ನಗರದಲ್ಲಿ ಕಾಂಗ್ರೆಸ್‌ನ ಮಹಾ ಅಧಿವೇಶನ ನಡೆಸಲು ಪ್ರಮುಖ ಕಾರಣವೆಂದರೆ ಲೋಕಮಾನ್ಯ ಬಾಲ ಗಂಗಾಧರ್ ತಿಲಕ್. ಅವರ ಪ್ರಭಾವ ಮತ್ತು ಮುಂಬೈ ಪ್ರೆಸಿಡೆನ್ಸಿಗೆ ಬೆಳಗಾವಿ ಒಳಪಟ್ಟ ಹಿನ್ನಲೆಯಲ್ಲಿ, ಸ್ವಾತಂತ್ರ್ಯದ ಕಾವು ಜನರಲ್ಲಿ ಜೋರಾಗಿತ್ತು.

**ಅಧಿವೇಶನದಲ್ಲಿ ತೆಗೆದುಕೊಂಡ ನಿರ್ಣಯಗಳು...**

- ಅಹಿಂಸಾ ಮಾರ್ಗದಲ್ಲಿ ಸ್ವಾತಂತ್ರ್ಯ ಹೋರಾಟ ನಡೆಸಬೇಕು. ದೇಶದ ಜನ ಹಿಂಸೆಯ ಮಾರ್ಗ ತುಳಿಯಬಾರದು.
- ಅಸಹಕಾರ ಚಳವಳಿಯ ಮೂಲಕ ಬ್ರಿಟಿಷರು ದೇಶ ಬಿಟ್ಟು ತೊಡಗುವಂತೆ ಮಾಡಬೇಕು ಎಂದು ಗಾಂಧೀಜಿಯವರು ಈ ಅಧಿವೇಶನದಲ್ಲಿ ಪ್ರಸ್ತಾಪಿಸಿದ್ದರು.
- ದೇಶದ ಜನರಲ್ಲಿ ಒಗ್ಗಟ್ಟಿಗಾಗಿ, ಸ್ಥಳೀಯ ಭಾಷೆಯ ಮಹತ್ವ ಹಾಗೂ ಪ್ರಾದೇಶಿಕ ಪ್ರಾಂತ್ಯಗಳ ನಿರ್ಮಾಣ.
- ಅಸ್ಪೃಶ್ಯತೆಯ ನಿವಾರಣೆಗಾಗಿ ಸಾಮಾಜಿಕ ಕಾರ್ಯಕ್ರಮಗಳು..

1924 ರ ಡಿಸೆಂಬರ್ 26, 27 ರಂದು ಎರಡು ದಿನ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ನ 39 ನೇ ಮಹಾ ಅಧಿವೇಶನ ಬೆಳಗಾವಿ ನಗರದ ತಿಲಕ್ ವಾಡಿ ( ಆಗಿನ ವಿಜಯನಗರ )ದಲ್ಲಿ ಜರುಗಿತ್ತು. ಅಧಿವೇಶನಕ್ಕೆ 6 ದಿನ ಮುಂಚಿತವಾಗಿ ಮಹಾತ್ಮ ಗಾಂಧೀಜಿಯವರು ರೈಲಿನ ಮೂಲಕ ಬೆಳಗಾವಿಗೆ ಆಗಮಿಸಿದ್ದರು.

ಇದೇ ಸಂದರ್ಭದಲ್ಲಿ ಅಧಿವೇಶನ ನಡೆಯುವ ಆವರಣಕ್ಕೆ ಹೊಂದಿಕೊಂಡಂತೆ ವಿಶೇಷ ರೈಲು ನಿಲ್ದಾಣದ ವ್ಯವಸ್ಥೆಯನ್ನು ಮಾಡಲಾಗಿತ್ತು. ಗೋಪುರ ಶೈಲಿಯ ಪ್ರವೇಶ ದ್ವಾರವನ್ನು ಈ ಅಧಿವೇಶನದಲ್ಲಿ ನಿರ್ಮಾಣ ಮಾಡಲಾಗಿತ್ತು.

**ಟೆಂಟ್ ನಲ್ಲಿ ಗಾಂಧೀಜಿಯವರ ವಾಸ್ತವ್ಯ :**

ಸರಳ ಜೀವನ ಅಳವಡಿಸಿಕೊಂಡಿದ್ದ ಮಹಾತ್ಮ ಗಾಂಧೀಜಿಯವರು ಬೆಳಗಾವಿ ಅಧಿವೇಶನಕ್ಕೆ ಒಂದು ವಾರ ಮುಂಚೆಯೇ ನಗರಕ್ಕೆ ಆಗಮಿಸಿದ್ದರು.

ಅಂದಿನ ಮುಖಂಡರು ಗಾಂಧೀಜಿಯವರ ವಾಸ್ತವ್ಯಕ್ಕೆ ಮನೆಗಳಲ್ಲಿ ವ್ಯವಸ್ಥೆ ಮಾಡಿದ್ದರು. ಆದರೆ ಅದಕ್ಕೆ ಒಪ್ಪದ ಬಾಪೂ ಅಧಿವೇಶನ ನಡೆಯುತ್ತಿದ್ದ ಸ್ಥಳದಲ್ಲೇ ಒಂದು ಟೆಂಟ್ ಹಾಕಿಕೊಂಡು ಅಲ್ಲಿಯೇ ವಾಸ್ತವ್ಯ ಮಾಡಿದ್ದರು.

ಈ ಸಂದರ್ಭದಲ್ಲಿ ಪಕ್ಕದ ಗ್ರಾಮಗಳಿಗೆ ಭೇಟಿ ನೀಡಿ ಜನರಲ್ಲಿ ಸ್ವಾತಂತ್ರ್ಯ ಹೋರಾಟದ ಅರಿವು ಮೂಡಿಸಿದ್ದರು. ಜಿಲ್ಲೆಯ ಹುದಲಿ ಗ್ರಾಮದವರಾದ ಕರ್ನಾಟಕದ ಖಾದಿ ಭಗೀರಥ ಎಂದೇ ಖ್ಯಾತಿ ಹೊಂದಿದ್ದ ಗಂಗಾದರ್ ರಾವ್ ದೇಶಪಾಂಡೆ ಅವರು ಸಂಪೂರ್ಣ ಅಧಿವೇಶನದ ಉಸ್ತುವಾರಿ ತಂಡದಲ್ಲಿದ್ದರು.

ಅಂದಿನ ಅಧಿವೇಶನಕ್ಕೆ ಒಟ್ಟು ಖರ್ಚಾಗಿದ್ದು 2,20,829 ಐದು ಆಣೆ ಹಾಗೂ ಆರು ಪೈಸೆ ಆಗಿತ್ತು.

ಅಧಿವೇಶನಕ್ಕೆ ಬರುವ ಜನರ ಊಟೋಪಚಾರ ಹಾಗೂ ವಾಸ್ತವ್ಯ ಮಾಡಲು ಅಚ್ಚುಕಟ್ಟಾದ ವ್ಯವಸ್ಥೆ ಮಾಡಲಾಗಿತ್ತು. ಜನರ ಬಾಯಾರಿಕೆ ನೀಗಿಸಲು ಅಧಿವೇಶನ ಸಂದರ್ಭದಲ್ಲಿ ನಿರ್ಮಾಣವಾದ ಪಂಪ ಸರೋವರ ( ಕಾಂಗ್ರೆಸ್ ಭಾವಿ ) ವೆಚ್ಚ 4,370 ರೂ 3 ಆಣೆ ಆಗಿತ್ತು. ಅಂದಿನಿಂದ ಇಂದಿನ ವರೆಗೂ ಈ ಭಾವಿ ಬತ್ತಿದ ನಿದರ್ಶನಗಳೇ ಇಲ್ಲ.



ಮುಖಂಡರಾದ ಡಾ. ಎನ್.ಎಸ್. ಹರ್ಡಿಕರ್, ಭೀಮರಾವ್ ಪೋದ್ದಾರ್, ಆರ್.ಕೆಂಭಾವಿ, ಎಸ್.ಎಲ್. ವಾಮನ್, ಗೋವಿಂದರಾವ್ ಯಾಳಗಿ, ಜೀವನ್ ರಾವ್ ಯಾಳಗಿ ಸೇರಿದಂತೆ ಇನ್ನೂ ಹಲವರು ಜನ ನಾಯಕರು ಯಾವುದಕ್ಕೂ ಕೊರತೆ ಬಾರದಂತೆ ನೋಡಿಕೊಂಡರು. ಇಲ್ಲಿನ ಶಿಸ್ತುಬದ್ಧ ವ್ಯವಸ್ಥೆಯನ್ನು ನೋಡಿದ ಗಾಂಧೀಜಿಯವರು ಮುಕ್ತಕಂಠದಿಂದ ಹೊಗಳಿದ್ದರು.



**ಬೆಳಗಾವಿ ಕಾಂಗ್ರೆಸ್ ಅಧಿವೇಶನದ ಬಗ್ಗೆ ಇತ್ತೀಚಿನ ವರ್ಷಗಳಲ್ಲಿ ನವದೆಹಲಿ ಗಣರಾಜ್ಯೋತ್ಸವ ಪೆರೇಡ್ ನಲ್ಲಿ ಪ್ರದರ್ಶಿತವಾದ ಕರ್ನಾಟಕದ ಸ್ತಬ್ಧ ಚಿತ್ರ**

**ಪ್ರಾದೇಶಿಕತೆಗೆ ಮಹತ್ವ ನೀಡಿದ್ದ ಅಧಿವೇಶನ :**

ಸ್ಥಳೀಯ ಭಾಷೆ ಹಾಗೂ ಸಂಸ್ಕೃತಿಗಳ ಬಗ್ಗೆ ಮಹಾತ್ಮ ಗಾಂಧೀಜಿಯವರಿಗೆ ಇದ್ದ ಕಳಕಳಿಯನ್ನು ಈ ಅಧಿವೇಶನದಲ್ಲಿ ಕಾಣಬಹುದಾಗಿದೆ.

ಹುಯಿಲಗೋಳ ನಾರಾಯಣರಾಯರು ರಚಿಸಿದ್ದ ಉದಯವಾಗಲಿ ನಮ್ಮ ಚಲುವ ಕನ್ನಡ ನಾಡು ಹಾಡನ್ನು ಬಾಲಕಿಯಾಗಿದ್ದ ಗಂಗೂಬಾಯಿ ಹಾನಗಲ್ ಅವರು ಅಧಿವೇಶನದಲ್ಲಿ ಹಾಡಿ ಎಲ್ಲರ ಪ್ರಶಂಸೆ ಗಳಿಸಿದ್ದು ಸಹ ಇಲ್ಲಿನ ಐತಿಹಾಸಿಕ ಘಟನೆ. ಇದೇ ಸಂದರ್ಭದಲ್ಲಿ ಕನ್ನಡ ಚಳವಳಿಗೂ ಶಕ್ತಿ ಲಭಿಸಿತ್ತು.

ಈ ಅಧಿವೇಶನದಲ್ಲಿ ಮಹಾತ್ಮ ಗಾಂಧೀಜಿಯವರ ಜೊತೆಗೆ ಪಂಡಿತ್ ಮೋತಿಲಾಲ್ ನೆಹರೂ, ಪಂಡಿತ್ ಜವಾಹರಲಾಲ್ ನೆಹರೂ, ಅನಿ ಬೆಸೆಂಟ್ ಸರದಾರ್ ವಲ್ಲಬ್ ಭಾಯ್ ಪಟೇಲ್ ಮುಂತಾದವರಿದ್ದರು.

**ಅಧಿವೇಶನ ನೆನಪಿಗೆ ವೀರಸೌಧ ನಿರ್ಮಾಣ :**

ಮಹಾತ್ಮ ಗಾಂಧೀಜಿಯವರು ಅಧ್ಯಕ್ಷರಾಗಿದ್ದ ಐತಿಹಾಸಿಕ 1924 ರ ಕಾಂಗ್ರೆಸ್ ಮಹಾ ಅಧಿವೇಶನದ ಸವಿ ನೆನಪಿಗಾಗಿ ನಗರದ ತಿಲಕ್ ವಾಡಿಯಲ್ಲಿ ವೀರಸೌಧ ವನ್ನು ನಿರ್ಮಾಣ ಮಾಡಲಾಗಿದೆ. ಅಧಿವೇಶನ ನಡೆದ ಸಂದರ್ಭದಲ್ಲಿ ಇದ್ದ ವಿಶಾಲವಾದ ಜಾಗದಲ್ಲಿ ಇಂದು ಕಟ್ಟಡಗಳು ತಲೆ ಎತ್ತಿವೆ. ಅಂದು ತೋಡಿದ್ದ ಭಾವಿಯನ್ನು ಈಗಲೂ ಕಾಣಬಹುದು.

1924 ರ ಅಧಿವೇಶನದ ಸಂಪೂರ್ಣ ಮಾಹಿತಿಯೂ ಈ ಸೌಧದಲ್ಲಿ ಲಭ್ಯವಿದ್ದು ಅಂದಿನ ಮಹತ್ವದ ಫೋಟೋಗಳನ್ನು ಇಲ್ಲಿ ಇರಿಸಲಾಗಿದೆ. ಜೊತೆಗೆ ಗ್ರಂಥಾಲಯವನ್ನೂ ಸಹ ನಿರ್ಮಿಸಲಾಗಿದೆ. ■



# ಚಂಪಾರಣ್ಯ ನೀಲಿ ಸಸ್ಯ

## ರೈತ ನಾಯಕ ಗಾಂಧಿ

– ವಿ.ಎನ್. ತಿಪ್ಪನಗೌಡ

**ಬಿಹಾರದ ಉತ್ತರ ಭಾಗದಲ್ಲಿರುವ ಜಿಲ್ಲೆ ಚಂಪಾರಣ್ಯ. ಗೌರಿಶಂಕರಕ್ಕೆ ಅತಿ ದೂರದಲ್ಲಿ ಇಲ್ಲ. ಗಂಗಾನದಿಯ ಉತ್ತರದಲ್ಲಿ ನೇಪಾಳದ ಗಡಿಗೆ ಸಮೀಪ, ಉತ್ತರ ಪೂರ್ವದ ತಪ್ಪಲಿನ ಪ್ರದೇಶದಲ್ಲಿದೆ. ಈ ಭಾಗದಲ್ಲಿ ರೈತರು ನೀಲಿ ಬಣ್ಣ ತಯಾರಿಸಲು ಬಳಸುವ ಇಂಡಿಗೊ ಸಸ್ಯಗಳನ್ನು ಬೆಳಸುವಂತೆ ಬ್ರಿಟಿಷರು ನಡೆಸಿದ ಬಲ ಪ್ರಯೋಗಕ್ಕೆ ಒಳಗಾಗಿದ್ದ ರೈತರ ಕಣ್ಣೀರ ಕಥೆ.**

"ಮಾನವ ರಕ್ತದ ಲೇಪನವಿಲ್ಲದೆ ನೀಲಿ ಸಸ್ಯಗಳ ಒಂದು ಪೆಟ್ಟಿಗೆಯೂ ಇಂಗ್ಲೆಂಡನ್ನು ತಲುಪಲಿಲ್ಲ" ಎಂದು 1848ರಲ್ಲಿ ಫರೀದಪುರ್‌ನ ಮ್ಯಾಜಿಸ್ಟ್ರೇಟ್ ಆಗಿದ್ದ ಬೆಂಗಾಲ ಸಿವಿಲ್ ಸರ್ವಿಸಸ್‌ನ ಇದ್-ಲೌಟರ್ ಇವರು ವಿಚಾರಣಾ ಸಮಿತಿಯ ಮುಂದೆ ಸಾಕ್ಷ ನುಡಿಯುತ್ತ ಈ ವಿಷಯ ಬಹಿರಂಗಗೊಳಿಸಿದರು. ವಿಚಾರಣೆ ಸಮಯದಲ್ಲಿ ಮ್ಯಾಜಿಸ್ಟ್ರೇಟ್ ಆದ ನನ್ನ ಮುಂದೆ ಬಂದ ರೈತರ ದೇಹ ಈಟಿಗಳಿಂದ ಚುಚ್ಚಿ ಚುಚ್ಚಿ ಗಾಯಗೊಳಿಸಿದ್ದನ್ನು ನಾನು ಕಂಡಿದ್ದೇನೆ. ಬ್ರಿಟಿಷ್ ಪ್ಲಾಂಟರ ಫೋರ್ಡ್‌ನ ಗುಂಡೇಟುಗಳಿಗೆ ತುತ್ತಾಗಿದ್ದ ರೈತರೂ ನನ್ನ ಮುಂದೆ ಹಾಜರಾಗಿದ್ದಾರೆ. ನೀಲಿ ಸಸ್ಯಗಳನ್ನು ಇಂಗ್ಲೆಂಡಿಗೆ ಒಯ್ಯುವ ಈ ವ್ಯವಸ್ಥೆಯನ್ನು ನಾನು "ರಕ್ತಪಾತದ ವ್ಯವಸ್ಥೆ" ಎಂದು ಪರಿಗಣಿಸಿದ್ದೇನೆ." ಈ ಮಾಹಿತಿಯಿಂದಲೇ ನೀಲಿ ಬೆಳೆ ಬೆಳೆಯುವ ರೈತರ ಸಂಕಷ್ಟ ಎಷ್ಟು ಗಂಭೀರವಾಗಿತ್ತು ಎಂಬದು ಗೊತ್ತಾಗುತ್ತದೆ.

ಅತ್ಯಂತ ಕಡಿಮೆ ಖರ್ಚಿನಲ್ಲಿ ನೀಲಿ ಸಸ್ಯಗಳನ್ನು ಬೆಳೆಯಲು ಪ್ಲಾಂಟರುಗಳು ಅಮಾನವೀಯ ಮತ್ತು ಕಾನೂನು ಬಾಹಿರ ವಿಧಾನಗಳನ್ನು ಅನುಸರಿಸುತ್ತಿದ್ದರು. ಈ ಬೆಳೆಯನ್ನು ಬೆಳೆಯುವ ರೈತರ ಮೇಲೆ ಆದ ದೌರ್ಜನ್ಯದ ವಿರುದ್ಧ ಬಿಟಿಷ್ ಪ್ಲಾಂಟರ್‌ಗಳ ಮೇಲೆ ಕ್ರಮ ಜರುಗಿಸಲು ಆದೇಶ ನೀಡಲು ಜವಾಬ್ದಾರಿಯ ಅಧಿಕಾರಿಗಳು ಹಿಂದೇಟು ಹಾಕುತ್ತಿದ್ದರು. ಇಂಡಿಗೊ ಆಯೋಗದ ಮುಂದೆ ರೈತರು ಹೀಗೆ ಹೇಳಿದರು. ನನ್ನ ಗಂಟಲನ್ನು ಕತ್ತರಿಸಿದರೂ ನೀಲಿ ಸಸ್ಯ ಬೆಳೆಯಲಾರೆ ಎಂದು ತನ್ನ ದುಮ್ಮಾನವನ್ನು ತೋಡಿಕೊಂಡರೂ ಅವನ ಕಷ್ಟ ಕಡಿಮೆ ಅಗಿಲ್ಲ. ಆಗ ಪ್ರಚಲಿತವಿದ್ದ ಈ ಹಾಡನ್ನು ಗಮನಿಸಿ

"ಜಮೀನೆರ ಶತ್ರು ನೀಲ್
ಕುರ್ಮೆರ ಶತ್ರು ಧೀಲ್
ತೊಮೆನಿ ಜಾತೆರ ಶತ್ರು ಪಾದ್ರೆ ಹಿಲ್

(ಜಮೀನಿನ ಶತ್ರು ನೀಲಿಸಸ್ಯ,
ಕಾರ್ಮಿಕರ ಶತ್ರು ಸೋಮಾರಿತನ,
ಜಾತಿಯ ಶತ್ರು ಪಾದ್ರಿ ಹಿಲ್)

1860 ರಲ್ಲಿ ದೀನಬಂಧು ಮಿತ್ರ ಬರೆದ ಬಂಗಾಳಿ ನಾಟಕ "ನೀಲ್ ದರ್ಪಣ"ದಲ್ಲಿ ರೈತರ ಸಂಕಷ್ಟಗಳನ್ನು ಮನಕರಗುವ ರೀತಿಯಲ್ಲಿ ವಿವರಿಸಲಾಗಿದೆ. ನೀಲಿ ಸಸ್ಯ ಬೆಳೆಯುವ ರೈತರ ಬೆಂಬಲಕ್ಕೆ ನಿಂತ ಬಂಗಾಲದ ಲೆಫ್ಟಿನೆಂಟ್ ಗವರ್ನರ್ ಸರ್ ಜಾನ್ ಪೀಟರ್ ಗ್ರಾಂಟ್ ಇವರ

ವಿರುದ್ಧ ಇಂಡಿಗೋ ಪ್ಲಾಂಟರ್‌ಗಳು ಆಂದೋಳನ ನಡೆಸಿದರು. ಅವರನ್ನು ಒಬ್ಬ ಭಯಂಕರ ಮನುಷ್ಯ – ಚೆಂಗಿಸ್ ಮತ್ತು ಕುಬ್ಲಾಯ್ ಖಾನ್, ತಾಮರ್ ಲೇನ್, ನಾಥಿರ ಎಂದು ಅವರನ್ನು ಅವಮಾನಗೊಳಿಸಿದರು. ಅವರು ಸೇವೆಯಿಂದ ನಿವೃತ್ತಿ ಹೊಂದಿದ ಮೇಲೆ ಅವರ ವಿರುದ್ಧ ಮಾನನಷ್ಟದ ಮೊಕದ್ದಮೆ ಸಹ ಹೂಡಿದರು.

ಕಲ್ಕತ್ತೆಯಲ್ಲಿ ಈ ನಾಟಕ ಪ್ರದರ್ಶಿಸುವಾಗ ಈ ನಾಟಕ ನೋಡಲು ಬಂದಿದ್ದ ಗೌರವಾನ್ವಿತ ನಾಯಕ ವಿದ್ಯಾಸಾಗರ ಅವರು ರೈತರ ಮೇಲೆ ಆಗುವ ದಬ್ಬಾಳಿಕೆಯ ದೃಶ್ಯನೋಡಿ ತಡೆಯಲಾಗದೆ ತಮ್ಮ ಶೂ ರಂಗಭೂಮಿಯತ್ತ ಎಸೆದರು

ಒಟ್ಟಿಗೆ ನೀಲಿ ಬೆಳೆಗಾರರ ಕಷ್ಟ ಹೇಳತೀರದಾಗಿತ್ತು. ಚಂಪಾರಣ್ಯದ ಗೇಣಿದಾರರ ದೂರುಗಳು ಸತ್ಯವಾದವುಗಳು ಎಂದು 1915 ರ ಜೂನ ದಲ್ಲಿ ಜೆ. ಎ. ಸ್ವೀನಿ ಸರಕಾರಕ್ಕೆ ವರದಿ ಮಾಡಿದ್ದನು. ಅಬ್ ವಾಬ್ ಎಂಬ ಪದ್ಧತಿಯಂತೆ ಗೇಣಿದಾರ ತಾನು ಕಾನೂನ ಪ್ರಕಾರ ಕೊಡಬೇಕಾದ ಹಣದ ದುಪ್ಪಟ್ಟು ಹಣ ಕೊಡಬೇಕಿತ್ತು.

ರಾಜಕುಮಾರ ಶುಕ್ಲ, ನೀಲಿ ಬೆಳೆಗಾರರ ಶೋಷಣೆ, ಕಷ್ಟ, ದಬ್ಬಾಳಿಕೆಯನ್ನು ಸ್ವತಃ ಕೃಷಿಕರಾದ ಅವರಿಗೆ ಆಳವಾದ ಅನುಭವವಿತ್ತು. ಸ್ಥಳೀಯವಾಗಿ ಬಾಬು ಬ್ರಜ್ ಕಿಶೋರ್ ಪ್ರಸಾದ್ ಅವರ ನೇತೃತ್ವದಲ್ಲಿ ರೈತರ ಸಂಕಷ್ಟ ನಿವಾರಿಸಲು ಮಾಡಿದ ಪ್ರಯತ್ನ ನಿರೀಕ್ಷಿಸಿದ ಫಲ ದೊರಕಲಿಲ್ಲ.

ಬಿಹಾರದ ಇಂಡಿಗೊ ಕಾರ್ಮಿಕರ ಸಂಕಷ್ಟ ಸ್ಥಿತಿಯನ್ನು ಲಖನೌದಲ್ಲಿ ಜರುಗಲಿದ್ದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಗಮನ ಸೆಳೆಯಲು ಲಖನೌಗೆ ರಾಜಕುಮಾರ ಶುಕ್ಲಾ ಈ ಮುಖಂಡರೊಂದಿಗೆ ತೆರಳಿದರು. ಈ ಅಧಿವೇಶನದಲ್ಲಿ ಬಾಬಾ ಬ್ರಜ್ ಕಿಶೋರ್ ಪ್ರಸಾದ, ರಾಜೇಂದ್ರ ಪ್ರಸಾದ್, ಶ್ರೀಮತಿ ಬೆಸೆಂಟ್, ಮಾಳವೀಯ, ಸುರೇಂದ್ರನಾಥ ಬ್ಯಾನರ್ಜಿ, ಜಿನ್ನಾ ಮತ್ತು ಮಜರುಲ್ ಹಕ್, ಲೋಕಮಾನ್ಯ ತಿಲಕ್, ಗಾಂಧಿಜೀ ಅವರೂ ಇದ್ದರು.

ರಾಜಕುಮಾರ ಶುಕ್ಲ ಮೊದಲು ಲೋಕಮಾನ್ಯ ತಿಲಕ ಹಾಗೂ ಮಾಳವೀಯ ಅವರಲ್ಲಿ ವಿನಂತಿಸಿದರು. ಅವರು ರಾಜಕೀಯ ಸ್ವಾತಂತ್ರ್ಯವೇ ಮೊದಲನೇ ಆದ್ಯತೆ ನಂತರ ಇವೆಲ್ಲ ಎಂದು ಅವರು ತಿಳಿಸಿದರು.

ದಕ್ಷಿಣ ಆಫ್ರಿಕಾದಲ್ಲಿ ಗುತ್ತಿಗೆ ಕಾರ್ಮಿಕರನ್ನು ಉದ್ಧಾರ ಮಾಡಿದ ವ್ಯಕ್ತಿ ಗಾಂಧೀಜಿ ಅವರು ಎಂದು ತಿಳಿದಿದ್ದ ರಾಜಕುಮಾರ ಶುಕ್ಲ ಅವರನ್ನು ಕಾಣಲು ನಿರ್ಧರಿಸಿದ. ಗಾಂಧಿ ಕಾಥೇವಾಡ ರೈತರ ಪೋಷಾಕು ಧರಿಸಿದ್ದರು. ಅವರ ರಾಜಕೀಯ ಗುರುಗಳಾದ ಗೋಖಲೆ ಅವರ ನಿಧನಕ್ಕೆ ಶೋಕ ಸೂಚಕವಾಗಿ ಪಾದರಕ್ಷೆಯನ್ನು ಧರಿಸಿರಲಿಲ್ಲ. ಅವರು ವಾಸವಾಗಿದ್ದ ಸ್ಥಳಕ್ಕೆ ಬಾಬು ಬ್ರಜ್ ಕಿಶೋರ ಪ್ರಸಾದರೊಂದಿಗೆ ರಾಜಕುಮಾರ ಶುಕ್ಲ ಭೇಟಿ ಮಾಡಿದರು. ಗಾಂಧೀಜಿ ಅವರ ಕಾಲಿಗೆ ನಮಸ್ಕರಿಸಿ ಚಂಪಾರಣ್ಯ ರೈತರ ದುಸ್ಥತಿಯನ್ನು ವಿವರಿಸಿ ಅಧಿವೇಶನದಲ್ಲಿ ನಿರ್ಣಯವೊಂದನ್ನು ಮಂಡಿಸಬೇಕೆಂದು ಕೋರಿದ. ನಾನು ಕಣ್ಣಾರೆ ನೋಡಿ ಪರಿಸ್ಥಿತಿಯನ್ನು ಅರ್ಥಮಾಡಿ ಕೊಳ್ಳದ ಹೊರತು ನಾನು ಏನನ್ನು ಹೇಳಲಾರೆ ಎಂದು ತಿಳಿಸಿದರು. ಅಧಿವೇಶನದಲ್ಲಿ ನಿಮ್ಮ ನಿರ್ಣಯ ಮಂಡಿಸಿ ಎಂದು ಹೇಳಿದರು. ಮರುದಿನ ಬಾಬು ಬ್ರಜ್ ಕಿಶೋರ್ ಪ್ರಸಾದ ನಿರ್ಣಯವನ್ನು ಮಂಡಿಸಿದರು. ಅದು ಅಂಗೀಕಾರವಾಯಿತು. ಗಾಂಧೀಜಿ ಅವರಿಗೆ ಚಂಪಾರಣ್ಯಕ್ಕೆ ಹೋಗಿ ಪ್ರತ್ಯಕ್ಷವಾಗಿ ನೋಡಿ ತಿಳಿಯಬೇಕೆಂದುಕೊಂಡರು. ಸದ್ಯ ನಾನು ಚಂಪಾರಣ್ಯಕ್ಕೆ ಬರುವುದಿಲ್ಲ, ಮುಂದೊಂದು ದಿನ ಬರುತ್ತೇನೆ ಎಂದು ಹೇಳಿ ಕಾನ್ಪುರಕ್ಕೆ ಹೋದರು. ರಾಜಕುಮಾರ ಶುಕ್ಲ ಅಲ್ಲಿಗೂ ಹೋಗಿ ಚಂಪಾರಣ್ಯಕ್ಕೆ ಬರಲು ಒತ್ತಾಯಿಸಿದನು. ಕಲ್ಕತ್ತಾಕ್ಕೆ ಬಂದಾಗ ತಪ್ಪದೇ ಬರುತ್ತೇನೆಂದು ಗಾಂಧೀಜಿ ಅವರು ಆಶ್ವಾಸನೆ ನೀಡಿದರು. ಆದರೂ ರಾಜಕುಮಾರ ಶುಕ್ಲ ಗಾಂಧೀಜಿ ಅವರನ್ನು ಕಾಣಲು ಸಬರಮತಿ ಆಶ್ರಮಕ್ಕೆ ಹೋಗಿ ಪುನಃ ಒತ್ತಾಯಿಸಿದರು. ಗಾಂಧೀಜಿ ಅವರು ಏಪ್ರಿಲ್ 7, 1917ರಲ್ಲಿ ಕಲ್ಕತ್ತಾದಿಂದ ರಾಜಕುಮಾರ ಶುಕ್ಲರೊಂದಿಗೆ ಚಂಪಾರಣ್ಯಕ್ಕೆ ಹೊರಟರು.

ಗಾಂಧೀಜಿ ಇಂಡಿಗೊದ ಪೊಟ್ಟಣ ನೋಡಿದ್ದರು. ಇದನ್ನು ಸಾವಿರಾರು ರೈತರು ಕಷ್ಟದಲ್ಲಿ ಚಂಪಾರಣ್ಯದಲ್ಲಿ ಬೆಳೆಯುತ್ತಾರೆ. ಚಂಪಾರಣ್ಯ ಎಲ್ಲಿದೆ ಎಂಬುದೂ ಸಹ ತಿಳಿದಿರಲಿಲ್ಲ. ಬಿಳಿಯ ಪ್ಲಾಂಟರ್‌ಗಳ ಲೂಟಿ ಮತ್ತು ಗುಲಾಮಗಿರಿಯ ಆಳ್ವಿಕೆಯನ್ನು ಕೊನೆಗಾಣಿಸುವುದು ಗಾಂಧೀಜಿ ಅವರ ಗುರಿಯಾಯಿತು. 1917 ಏಪ್ರಿಲ್ 10 ರಂದು ಚಂಪಾರಣ್ಯಕ್ಕೆ ಹೋಗಲು ಮೊದಲು ಪಾಟ್ನಾ ತಲುಪಿದರು. ಪಾಟ್ನಾ ನಗರಕ್ಕೆ ಗಾಂಧೀಜಿಗೆ ಮೊದಲ ಭೇಟಿ. ಅಲ್ಲಿ ಅವರಿಗೆ ಯಾರೂ ಗೊತ್ತಿರುವವರು ಇರಲಿಲ್ಲ. ರಾಜಕುಮಾರ ಶುಕ್ಲ ಗಾಂಧೀಜಿ ಅವರನ್ನು ಬಾಬು ರಾಜೇಂದ್ರ ಪ್ರಸಾದ ಅವರ ಮನೆಗೆ ಕರೆದುಕೊಂಡು ಹೋದನು. ರಾಜೇಂದ್ರ ಪ್ರಸಾದರು ಕೆಲಸದ ನಿಮಿತ್ತ ಪುರಿಗೆ



ಹೋಗಿದ್ದರು. ಮನೆಯಲ್ಲಿ ಸೇವಕನೊಬ್ಬ ಇದ್ದ. ಅವನು ಇವರ ಕಡೆಗೆ ಗಮನಕೊಡಲಿಲ್ಲ. ಬಿಹಾರದಲ್ಲಿ ಕಟ್ಟುನಿಟ್ಟಾದ ಅಸ್ಪೃಶ್ಯತೆ ಇತ್ತು. ಗಾಂಧಿ ಅವರು ಯಾವ ಜಾತಿಗೆ ಸೇರಿದವರೆಂದು ಸೇವಕನಿಗೆ ಗೊತ್ತಿಲ್ಲದ್ದರಿಂದ ಅವನು ಬಾವಿಯಿಂದ ನೀರು ಸೇದುವಾಗ ಗಾಂಧಿ ಅವರಿಗೆ ಅವಕಾಶವಿರಲಿಲ್ಲ'. ರಾಜಕುಮಾರ ಶುಕ್ಲ ಗಾಂಧೀಜಿಗೆ ಮಾರ್ಗದರ್ಶನ ಮಾಡಲಾರ ಎಂದು ಸಮಸ್ಯೆಯನ್ನು ಖುದ್ದಾಗಿ ನಿರ್ವಹಿಸಬೇಕೆಂದು ತೀರ್ಮಾನಿಸಿದರು.

ಲಂಡನ್‌ನಲ್ಲಿ ಓದುತ್ತಿದ್ದಾಗ್ಗೆ ಮುಜರಲ್ ಹಕ್ ಎಂಬುವವರ ಪರಿಚಯವಿತ್ತು. ಪಾಟ್ನಾದಲ್ಲಿ ತಂಗಬೇಕಾದಾಗ ನಮ್ಮಲ್ಲಿ ತಂಗಬೇಕೆಂದು ಕೋರಿದ್ದರು. ತಾವು ಪಾಟ್ನಕ್ಕೆ ಬಂದ ವಿಷಯವನ್ನು ಅವರಿಗೆ ತಿಳಿಸಿದರು. ಮಜರಲ್ ಹಕ್ ತಕ್ಷಣ ಕಾರಿನಲ್ಲಿ ಬಂದು ಆತಿಥ್ಯ ಒಪ್ಪಿಕೊಳ್ಳಲು ಕೋರಿದರು. ಚಂಪಾರಣ್ಯದ ಕೆಲಸದ ವಿಷಯ ವಿವರಿಸಿ ಅಲ್ಲಿಗೆ ತಲುಪುವುದರ ಕುರಿತು ಗಾಂಧಿ ಜೀ ಮಾರ್ಗದರ್ಶನ ಕೋರಿದರು. ಗಾಂಧೀಜಿ ಅವರು ರೈಲಿನಲ್ಲಿ ಮುಜಫರ ಪುರ ತಲುಪಿದರು. ಅಲ್ಲಿ ಜೆ. ಬಿ. ಕೃಪಲಾನಿ ಕಾಲೇಜಿನಲ್ಲಿ ಪ್ರೊಫೆಸರ್ ಆಗಿದ್ದರು. ಗಾಂಧೀಜಿ ಅವರು ಬರಮಾಡಿಕೊಳ್ಳಲು, ಕೃಪಲಾನಿ ಅವರು ವಿದ್ಯಾರ್ಥಿಗಳನ್ನು ಕರೆದುಕೊಂಡು ರೈಲ್ವೆ ಸ್ಟೇಷನ್‌ನಲ್ಲಿ ಭೇಟಿಯಾದರು. ಅವರಿಗೆ ಆರತಿಯನ್ನು ಮಾಡಿ ಬರಮಾಡಿಕೊಂಡರು. ಗಾಂಧೀಜಿ ಅವರು ಕುಳಿತಿದ್ದ ಗಾಡಿಯನ್ನು ಕೃಪಲಾನಿಯವರೇ ಎಳೆದುಕೊಂಡು ಹೋದರು. ಕೃಪಲಾನಿ ಅವರು ತಮ್ಮ ಹುದ್ದೆಗೆ ರಾಜೀನಾಮೆ ಕೊಟ್ಟಿದ್ದರಿಂದ ಅವರನ್ನು ಪ್ರೊ. ಮಲ್ಕಾನಿ ಅವರ ಜೊತೆ ಉಳಿಸಿದ್ದರು. ಅಂದಿನ ದಿನಗಳಲ್ಲಿ ಸರ್ಕಾರಿ ನೌಕರರೊಬ್ಬರು ಗಾಂಧೀಜಿಗೆ ಆಶ್ರಯ ನೀಡುವುದು ಅಸಾಧಾರಣ ವಿಷಯವಾಗಿತ್ತು. ರಾತ್ರಿ ಕೃಪಲಾನಿ ಅವರೊಂದಿಗೆ ಪರಿಸ್ಥಿತಿ ಕುರಿತು ಅದರಲ್ಲೂ ತಿರ್ಹುತ ವಿಭಾಗದ ತೀವ್ರ ಕಠಿಣ ಪರಸ್ಥಿತಿ ಕುರಿತು ಚರ್ಚಿಸಿದರು.

ಮರುದಿನ ವಕೀಲರ ಗುಂಪೊಂದು ಗಾಂಧೀಜಿ ಅವರನ್ನು ಭೇಟಿ ಮಾಡಿದರು. ಸರ್ಕಾರಿ ನೌಕರರ ಮನೆಯಲ್ಲಿ ತಂಗಿದರೆ ಯಾವ ಉದ್ದೇಶದಿಂದ ಇಲ್ಲಿಗೆ ಬಂದಿರುವಿರೋ ಆ ಉದ್ದೇಶ ಈಡೇರಿಸುವಲ್ಲಿ ಕಷ್ಟವಾಗುತ್ತದೆ. ತಾವು ಇಲ್ಲಿಯ ಪ್ರಸಿದ್ಧ ವಕೀಲರಾದ ಗಯಾಬಾಬು ಅವರ ಜೊತೆ ತಂಗಬೇಕೆಂದು ವಿನಂತಿಸಿದರು. ಬಾಬು ಬ್ರಜ್ ಕಿಶೋರ್ ಪ್ರಸಾದ್ ಹಾಗೂ ಬಾಬು ರಾಜೇಂದ್ರ ಪ್ರಸಾದರು ಇಷ್ವರಲ್ಲಿ ನಮ್ಮನ್ನು ಸೇರಿಕೊಳ್ಳುವವರಿದ್ದಾರೆ ಎಂದು ತಿಳಿಸಿದರು. ಇವರಿಬ್ಬರೂ ಮುಜಫರ್‌ಪುರಗೆ ಬಂದರು. ಬಾಬು ಬ್ರಜ್ ಕಿಶೋರ ಪ್ರ ಸಾ ದಾರು ಪರಿಸ್ಥಿತಿಯ ವಾಸ್ತವಾಂಶಗಳನ್ನು ಎಳೆಎಳೆಯಾಗಿ ಬಿಡಿಸಿ ತಿಳಿಸಿದರು. ಚಂಪಾರಣ್ಯದ ರೈತ ತನ್ನ ಜಮೀನಿನ 30 ಗುಂಟೆ ಭಾಗದಲ್ಲಿ ತನ್ನ ಜಮೀನುದಾರನಿಗೆ ಮೂರು ಗುಂಟೆ ಭಾಗದಲ್ಲಿ ನೀಲಿಯನ್ನು ಕಡ್ಡಾಯವಾಗಿ ಬೆಳೆದು ಬಿಳಿಯ ಮಾಲಕರಿಗೆ ಕೊಡಬೇಕಿತ್ತು. ಇದಕ್ಕೆ "ತೀನ ಕಠಿಯಾ" ಪದ್ಧತಿ ಎಂದು ಕರೆಯಲಾಗುತ್ತಿತ್ತು. ಈ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡಾಗ ಗಾಂಧೀಜಿ ಅವರಿಗೆ ಈ ವಿಷಯವನ್ನು ಕಾನೂನಿನ ನ್ವಯ ನ್ಯಾಯಾಲಯಗಳಿಗೆ ಒಯ್ಯುವ ಮೊದಲು ರೈತರಲ್ಲಿ ಆತ್ಮ ವಿಶ್ವಾಸ ಬೆಳಸಬೇಕಾಗಿದೆ ಎಂಬುದನ್ನು ಮನಗಂಡರು. ತೀನ ಕಠಿಯಾ ಪದ್ಧತಿ ನಿರ್ಮೂಲನೆಯಾಗಬೇಕು. ಈ ಗುರಿಯನ್ನು ಸಾಧಿಸಲು ಪ್ರಯತ್ನಿಸಬೇಕೆಂದರು. ಈ ಕಾರ್ಯಕ್ಕೆ ಎರಡು ವರ್ಷಗಳಾದರೂ ಚಿಂತೆ ಇಲ್ಲ. ಇದನ್ನು ಪರಿಹರಿಸಲು ಪ್ರಯತ್ನಿಸೋಣ ಈ ಕಾರ್ಯಕ್ಕೆ ವಕೀಲರಾದ ಬಾಬು ಬ್ರಜ್ ಕಿಶೋರ ಪ್ರಸಾದರು ಸಹಾಯ ಕೋರಿದರು. ಸ್ಥಳಿಯ ಭಾಷೆ ಹಾಗೂ ಹಿಂದಿಯ ಉಪ ಭಾಷೆಯಾದ ಭೋಜಪುರಿ ಹಾಗೂ ಉರ್ದು ದಾಖಲೆಗಳನ್ನು ತರ್ಜುಮೆ ಮಾಡಲು ಸಹಾಯ ಕೋರಿದರು ಎಲ್ಲರೂ ಪ್ರೀತಿಯಿಂದ ಸೇವಾ ಮನೋಭಾವನೆಯಿಂದ ಕೆಲಸ ಮಾಡಲು ಒಪ್ಪಿದರು. ಸೆರೆಮನೆ ವಾಸಕ್ಕೂ ನಾವು ಸಿದ್ಧ ಎಂದು ಆಶ್ವಾಸನೆ ಕೊಟ್ಟರು. ಚಂಪಾರಣ್ಯ ರೈತರ ಸ್ಥಿತಿ ಗತಿಗಳನ್ನು ಗಾಂಧೀಜಿ ಖುದ್ದಾಗಿ ಸಾವಿರಾರು ರೈತರನ್ನು ಬೆಟ್ಟಿಯಾಗ ಬಯಸಿದರು ಅದಕ್ಕೂ ಮೂದಲು ಪ್ಲ್ಯಾಂಟರುಗಳ ಅಭಿಪ್ರಾಯ ಏನು ಮತ್ತು ತಿರ್ಹುತ ವಿಭಾಗದ ಕಮೀಷನರ್ ಬೆಟ್ಟಿಯಾಗಿ ಅವರ ಅಭಿಪ್ರಾಯ ತಿಳಿಯಬಯಸಿದರು.

1917ರ ಎಪ್ರಿಲ್ 11 ರಂದು ಬಿಹಾರ ಪ್ಲ್ಯಾಂಟರುಗಳ ಸಂಘದ ಕಾರ್ಯದರ್ಶಿ ಜೆ.ಎಂ. ವಿಲ್ಸನ್ ರನ್ನು ಬೆಟ್ಟಿಯಾದರು. ರೈತರ ಮತ್ತು ಪ್ಲ್ಯಾಂಟರುಗಳ ವಿಚಾರದಲ್ಲಿ ತಲೆ ಹಾಕುವಂತಿಲ್ಲ ಬೇಕೆದಂರೆ ಮನವಿ ಸಲ್ಲಿಸ ಬಹುದು ಎಂದು ಖಂಡ ತುಂಡ ವಾಗಿ ಹೇಳಿದ. ನನ್ನನ್ನು ಹೊರಗಿನವ ಎಂದು ಪರಿಗಣಿಸದಿದ್ದರೆ ಗೇಣಿದಾರು ಅಪೇಕ್ಷಿಸಿದರೆ ಅವರ ಪರಸ್ಥಿತಿಯ ವಿಚಾರಣೆ ನಡೆಸುವ ಹಕ್ಕು ನನಗಿದೆ ಎಂದು ಗಾಂಧೀಜಿ ಸೌಜನ್ಯದಿಂದ ಉತ್ತರಿಸಿದರು. ತಿರ್ಹುತ್ ವಿಭಾಗದ ಕಮೀಷನರ ಆದ ಎಲ್. ಎಫ್. ಮೋರ್ಸಹೆಡ್ ಅವರನ್ನು ಗಾಂಧೀಜಿ ಭೇಟಿಯಾದರು. ಕಮೀಷನರ್ ಗಾಂಧೀಜೀಯವರಿಗೆ ನೀವು ಇಲ್ಲಿಗೇಕೆ ಬಂದಿರಿ ಇಲ್ಲಿಂದ ಹೊರಟುಹೋಗಿ ಸರ್ಕಾರದ ಪರವಾಗಿ ವಿಚಾರಣೆ ನಡೆಸಲಾಗುವುದು ಎಂದು ಹೆದರಿಸಿದನು. ಸರ್ಕಾರ ಅವರನ್ನು ದಸ್ತಗೀರ ಮಾಡುವ ಮೊದಲು ರೈತರನ್ನು ನೇರವಾಗಿ ಬೇಟಿಯಾಗಿ ಅವರ ಅಭಿಪ್ರಾಯ ಪಡೆಯಲು ತೀರ್ಮಾನಿಸಿ ಬೇಟಿಗೆ ಹೋದರು. ಗಾಂಧೀಜಿ ಬಂದ ವಿಷಯ ಎಲ್ಲಡೆ ಹರಡಿತ್ತು. ಅನೇಕ ಗೇಣಿದಾರು ಮುಜಫರಪುರ ವರೆಗೆ ಬಂದರು. ಅವರ ಕುಂದುಕೊರತೆಗಳನ್ನು ಆಲಿಸಿದರು ಹಾಗೂ ದಾಖಲೆಗಳನ್ನು ಪರಿಶೀಲಿಸಿದರು. ಎಪ್ರೆಲ್ 14 ರಂದು ಚಂಪಾರಣ್ಯಕ್ಕೆ ಪ್ರಯಾಣ ಬೆಳೆಸಿದರು.

ಗಾಂಧೀಜಿ ಅವರು ಒಂದು ಗ್ರಾಮಕ್ಕೆ ಭೇಟಿ ಕೊಟ್ಟು, ಅವರು ವಾಸಿಸುವ ಗುಡಿಸಲಿಗೆ ಹೋಗಿ ಅವರು ಹೇಗೆ ಜೀವಿಸುತ್ತಿದ್ದಾರೆ ಎಂಬುದನ್ನು ಕಣ್ಣಾರೆ ಕಂಡು ಅವರೆಲ್ಲರನ್ನು ಮಾತನಾಡಿಸಿದರು. ಹಳ್ಳಿಗಳ ಸ್ಥಿತಿ ಎಲ್ಲಿಯವರೆಗೆ ಸುಧಾರಿಸುವುದಿಲ್ಲವೊ ಅಲ್ಲಿನವರೆಗೆ ಭಾರತ ಸಂತೋಷದಿಂದ ಇರಲಾರದು ಎಂದು ಅವರೊಂದಿಗಿದ್ದವರಿಗೆ ಹೇಳಿದರು. ಹಳ್ಳಿಯಿಂದ ಹಿಂತಿರುಗಿದ ಮೇಲೆ ದಕ್ಷಿಣ ಆಫ್ರಿಕಾದಲ್ಲಿಯ ತನ್ನ ಅನುಭವವನ್ನು ಹೇಳಿದರು. ಒಬ್ಬನನ್ನು ಜೈಲಿಗೆ ಹಾಕಿದಾಗ ಇನ್ನೊಬ್ಬ ಅವನ ಸ್ಥಾನ ತುಂಬುತ್ತಿದ್ದ ಎಂಬ ವಿಷಯ ವಿವರಿಸಿದರು. ಮೋತಿಹಾರಿನ ಬಳಿ ಒಬ್ಬ ರೈತನ್ನು ಬಿಳಿಯರು ಸಿಕ್ಕಾಪಟ್ಟೆ ಹೊಡೆದಿದ್ದಾರೆ ಎನ್ನುವ ಸುದ್ದಿ ಬಂತು. ಗಾಂಧೀಜಿಯವರು ಅಲ್ಲಿಗೆ ಹೋಗಲೇಬೇಕೆಂದು ನಿಶ್ಚಯಿಸಿದರು. ಗಾಂಧೀಜಿ ಅವರನ್ನು ಒಂದು ಆನೆಯ ಮೇಲೆ ಕೂರಿಸಿ ಮೋತಿಹಾರಿಗೆ ಕರೆದುಕೊಂಡು ಹೋದರು. ಅವರ ಜೊತೆ

ಸಾವಿರಾರು ದೀನದಲಿತರು, ಅರೆನಗ್ನರು ನಡೆದುಕೊಂಡು ಹೋದರು. ಅರ್ಥದಾರಿ ಕ್ರಮಿಸಿರಬಹುದು. ಬಂಧನದ ವಾರಂಟ್ ತೆಗೆದುಕೊಂಡು ಪೋಲೀಸರು ಬಂದರು. ತಾಜಿರಾತೇ ಹಿಂದ್ ಸೆಕ್ಷನ್ 144ರ ಅಡಿಯಲ್ಲಿ ಗಾಂಧಿಜಿ ಅವರಿಗೆ ಚಂಪಾರಣ್ಯದಿಂದ ತಕ್ಷಣ ಹೊರಟುಹೋಗಬೇಕೆಂದು, ಇಲ್ಲವಾದರೆ ಅವರ ಮೇಲೆ ಮೊಕದ್ದಮೆ ಹೂಡಲಾಗುವುದು ಎಂದು ತಿಳಿಸಿದರು ಗಾಂಧೀಜಿ ಅವರು ಈ ಆದೇಶ ಪಾಲನೆ ಮಾಡುವುದಿಲ್ಲ ಎಂದು ತಿರಸ್ಕರಿಸಿದರು. ಆಗ ಅವರನ್ನು ಕೋರ್ಟಿಗೆ ಹಾಜರಾಗತಕ್ಕದ್ದು ಎಂದು ಆದೇಶ ನೀಡಲಾಯಿತು. ಮರುದಿನ ಅಶಾಂತಿ ಹರಡಿದೆ ಎಂದು ಹೇಳಿ ಕೇಸ್ ಹಾಕಲಾಯಿತು. ಗಾಂಧೀಜಿ ರಾತ್ರಿಯೆಲ್ಲಾ ಎಚ್ಚರವಿದ್ದು ಪತ್ರಗಳನ್ನು ಬರೆದರು. ಪರಿಸ್ಥಿತಿಯನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕೆಂದು ಬಾಬು ಬ್ರಜ್ ಕಿಶೋರ ಪ್ರಸಾದರಿಗೆ ತಿಳಿಸಿದರು.

ಗಾಂಧೀಜಿಗೆ ವಾರಂಟ್ ಹೊರಟ ವಿಷಯ ಕಾಳ್ಗಿಚ್ಚಿನಂತೆ ಹರಡಿತು. ಜನರು ಗುಂಪು ಗುಂಪಾಗಿ ಸೇರಿದರು. ಗಾಂಧೀಜಿ ಜನರನ್ನು ನಿಯಂತ್ರಿಸಿದರು. ಶಾಂತವಾಗಿರುವಂತೆ ತಿಳಿಹೇಳಿದರು. ಇದನ್ನು ನೋಡಿದ ಜಿಲ್ಲಧೀಶರೂ, ಪೋಲೀಸ್ ಇನ್ಸ್‌ಪೆಕ್ಟರ್, ಮ್ಯಾಜಿಸ್ಟ್ರೇಟ್‌ರಲ್ಲಿ ಗಾಂಧೀಜಿ ಬಗ್ಗೆ ಒಂದು ತರಹದ ಆತ್ಮೀಯತೆ ಬೆಳೆಯಿತು. ಆಂಗ್ಲ ಅಧಿಕಾರಿಗಳು ಗಾಂಧೀಜಿ ಅವರ ಸಂಯಮ, ಸಭ್ಯ ವ್ಯವಹಾರವನ್ನು ಕಂಡು ಪ್ರಭಾವಿತರಾದರು. ಮರುದಿನ ಗಾಂಧೀಜಿ ಅವರು ಅಪರಾಧಿಯ ಹಾಗೆ ಮೋತಿಹಾರಿಯ ನ್ಯಾಯಾಲಯದಲ್ಲಿ ಹಾಜರಾಗಿ "ನನಗೆ ಜಾರಿ ಮಾಡಲಾದ ನಿಮ್ಮ ಆಜ್ಞೆಯನ್ನು ಕಡೆಗಣಿಸಿದ್ದೇನೆ. ನ್ಯಾಯಬದ್ಧ ಅಧಿಕಾರಕ್ಕೆ ಅಗೌರವ ಸೂಚಿಸುವ ಸಲುವಾಗಿ ಮಾಡಿರುವ ಕೃತ್ಯ ಇದಲ್ಲ. ನಮ್ಮ ಅಸ್ತಿತ್ವದ ಅತ್ಯುಚ್ಚ ಕಾನೂನಾದ ಆತ್ಮ ಸಾಕ್ಷಿಯ ವಿಧೇಯ ಪಾಲಕನಾಗಿ ಹೀಗೆ ಮಾಡಿದ್ದೇನೆ" ಎಂದು ನ್ಯಾಯಾಲಯಕ್ಕೆ ತಿಳಿಸಿದರು. ಗಾಂಧೀಜಿ ಅವರು ಚಂಪಾರಣ್ಯದ ಸಮಾಚಾರವನ್ನು ಪತ್ರ ಮುಖೇನ ಆಂಡ್ರೋಸ್, ಶ್ರೀನಿವಾಸ ಶಾಸ್ತ್ರಿ, ಮದನ ಮೋಹನ ಮಾಳವೀಯ, ಪೋಲಕ್ ಕಾಲ್ ಬ್ಯಾಕ್ ಅಹಮದಾಬಾದಿನಲ್ಲಿದ್ದ ಮದನ್‌ಲಾಲ್‌ರಿಗೆ ಚಂಪಾರಣ್ಯದ ಪರಿಸ್ಥಿತಿ ಬಗ್ಗೆ ಮುಂಜಾಗ್ರತೆಯೆ ತಿಳಿಸಿದ್ದರು. ಅದರಂತೆ ಪತ್ರಿಕಾ ಮಾಧ್ಯಮದವರಿಗೆ ಸಹ ಮೇಲಿಂದ ಮೇಲೆ ಚಂಪಾರಣ್ಯದ ಸ್ಥಿತಿಗತಿಗಳ ಕುರಿತು ತಿಳಿಸುತ್ತಿದ್ದರು.

ಬ್ರಿಟಿಷ್ ಸರ್ಕಾರ ಗಾಂಧೀಜಿ ಅವರನ್ನು ಬಂಧಿಸುವ ಧೈರ್ಯ ಮಾಡಲಿಲ್ಲ. ಬಿಹಾರ ಬಿಟ್ಟು ಹೊರಡಬೇಕೆಂಬ ಆದೇಶವನ್ನು ಹಿಂಪಡೆಯಿತು. ರೈತರ ಸ್ಥಿತಿ ಸುಧಾರಿಸಲು, ಮಾಹಿತಿ ಸಂಗ್ರಹ ಮಾಡಲು ಅನುಮತಿ ನೀಡಿತು. ರೈತರ ಅಹವಾಲುಗಳನ್ನು ಪರಿಶೀಲಿಸುವ ತನಿಖಾ ಸಮಿತಿಗೆ ಗಾಂಧೀಜಿ ಅವರನ್ನು ಸದಸ್ಯರನ್ನಾಗಿ ನೇಮಿಸಿತು. ತೀನ ಕಠಿಯಾ ಪದ್ಧತಿಯನ್ನು ರದ್ದುಮಾಡಲು ಸರ್ಕಾರಕ್ಕೆ ಈ ಸಮಿತಿ ವರದಿ ಸಲ್ಲಿಸಿತು. ಒಂದು ಶತಮಾನಕಾಲ ಅಸ್ತಿತ್ವದಲ್ಲಿದ್ದ ತೀನಕಠಿಯಾ ವ್ಯವಸ್ಥೆ ರದ್ದಾಯಿತು. ಪ್ಲ್ಯಾಂಟರುಗಳ ಪ್ರಭುತ್ವ ಕೊನೆಗೊಂಡಿತು. ಕಷ್ಟ ಅನುಭವಿಸುತಿದ್ದ ರೈತರು ಚೇತರಿಸಿಕೊಂಡರು. ನೀಲಿ ಸಸ್ಯಗಳ ಕಲೆಯನ್ನು ಎಂದೇಂದೂ ತೊಳೆಯಲಾಗದು ಎಂದು ನಂಬಿದ್ದ ಅವರ ಮೂಢ ನಂಬಿಕೆಯನ್ನು ಗಾಂಧೀಜಿಯವರು ತಮ್ಮ ಕಠಿಣ ಪರಿಶ್ರಮದಿಂದ ಈ ಮೂಡನಂಬಿಕೆಯನ್ನು ಹುಸಿಗೊಳಿಸಿದರು

ಚಂಪಾರಣ್ಯದ ಈ ವಿಷಯ ದೇಶಾದ್ಯಂತ ಪ್ರಚಾರವಾಯಿತು. ಗಾಂಧೀಜಿ ಅವರು ಚಂಪಾರಣ್ಯದ ರೈತರ ಸಮಸ್ಯೆ ಪೂರ್ಣ ಮುಗಿಯುವವರೆಗೆ ಚಂಪಾರಣ್ಯದಲ್ಲಿರಲು ತೀರ್ಮಾನಿಸಿ ಕಸ್ತೂರಿ ಬಾ ಮತ್ತು ಬಳಗವನ್ನು ಚಂಪಾರಣ್ಯಕ್ಕೆ ಕರೆಸಿಕೊಂಡರು. ಹಿಂದಿಯಲ್ಲಿ ಪತ್ರ ವ್ಯವಹಾರ ಮಾಡುವುದನ್ನು ಕಲಿತರು. ಶಾಲೆಗಳನ್ನು ಪ್ರಾರಂಭಿಸಿದರು. ಗ್ರಾಮಸ್ಥರಿಗೆ ನೈರ್ಮಲ್ಯದ ಮಹತ್ವ ತಿಳಿಹೇಳುತ್ತ ಕೃಷಿ ಪದ್ಧತಿಯಲ್ಲಿ ಸುಧಾರಣೆ ತಂದುಕೊಳ್ಳಬೇಕೆಂದು ತಿಳಿಹೇಳಿದರು. ಬ್ರಿಟಿಷ್ ಅಧಿಕಾರಿಗಳು ಕಸ್ತೂರ್‌ಬಾ ಚಂಪಾರಣ್ಯದಲ್ಲಿರಲು ಅಸಮಾಧಾನ ವ್ಯಕ್ತಪಡಿಸಿದರು. ಮುಗ್ಧ ಮಹಿಳೆಯ ಮೇಲೆ ಹೃದಯ ಹೀನ ತೀರ್ಮಾನ ಮಾಡಿದ್ದಾರೆ ಎಂದು ಸರ್ಕಾರಕ್ಕೆ ಗಾಂಧೀ ಪತ್ರ ಬರೆದರು. ಶಾಲೆಗಳನ್ನು ಸ್ಥಾಪಿಸಲು ಸೇವಾ ಮನೋಭಾವ ಇರುವ ಶಿಕ್ಷಕರು ಬೇಕೆಂದು ಗಾಂಧೀಜಿ ಅವರ ಕರೆಗೆ ಬೆಳಗಾಂವದಿಂದ ಗಂಗಾಧರ ರಾವ್ ದೇಶಪಾಂಡೆ ಅವರು ಬಾಬಾಸಾಹೆಬ



ಸೋಮಣ್ಣ, ಮಂಡಲೀಕ ಮತ್ತು ಅವಂತಿಕಾ ತಾಯಿ ಗೋಖಲೆ ಅವರನ್ನು ಮುಂಬೈಯಿಂದ ಚಂಪಾರಣ್ಯಕ್ಕೆ ಕಳುಹಿಸಿದರು. 1917ರಲ್ಲಿ ಮೊಟ್ಟ ಮೊದಲ ಬಾರಿಗೆ ದೇಶದಲ್ಲಿ ಗ್ರಾಮಸೇವೆಗೆ ಅಡಿಪಾಯ ಬಿತ್ತು. ಮಹಿಳೆಯರು ತಮ್ಮ ಸಂಕೋಲೆಗಳನ್ನು ಬಿಟ್ಟು ಸಮಾಜದ ಸೇವೆಗೆ ತೊಡಗಿಸಿಕೊಳ್ಳುವಂತಾಯಿತು. ಸರ್ಕಾರ ಸರ್ ಎಡ್‌ವರ್ಡ್ ಗೇಟ್‌ನ ಅಧ್ಯಕ್ಷತೆಯಲ್ಲಿ ಪರೀಕ್ಷಣಾ ಸಮಿತಿ ರಚಿಸಿತು. ವಿವಾದ ರಹಿತ ರಿಪೋರ್ಟ್ ತಯಾರಿಸಿತು. ಈ ಸಮಿತಿಯ ಶಿಫಾರಸ್ಸನ್ನು ಸರ್ಕಾರ ಒಪ್ಪಿಕೊಂಡಿತು. ನೂರಾರು ವರ್ಷಗಳಿಂದ ನಡೆದು ಬಂದ ತೀನ್ ಕಠಿಯಾ ಪದ್ಧತಿಯನ್ನು ತೆಗೆದು ಹಾಕಲಾಯಿತು. ನೀಲಿಯ, ಬಿಳಿಯರು ರೈತರ ಬಾಕಿಯನ್ನು ಚುಕ್ತಾ ಮಾಡಿದರು. ಬಡಜನರ ಕಣ್ಣೀರಿನ ಕಥೆ ಕೊನೆಗೊಂಡು ಬಡವರಿಗೆ ತಮಗೆ ಕಾಣದತಮ್ಮ ಶಕ್ತಿಯ ಅರಿವಾಯಿತು. ಬ್ರಿಟೀಷ್ ಸರ್ಕಾರದ ವಿರುದ್ಧ ಜನತೆಯ ಅಹಿಂಸಾತ್ಮಕ ಜಯವಾಯಿತು. ಬಾಬು ರಾಜೇಂದ್ರ ಪ್ರಸಾದರು ಗಾಂಧಿ ಜೀಯವರು "ನಮಗೆ ಆತ್ಮಾವಲಂಬನೆಯನ್ನು ನಮ್ಮೆಲ್ಲರಿಗೆ ಮನಮುಟ್ಟುವ ಹಾಗೆ ತಿಳಿಸಿ ಕೊಟ್ಟರು" ಎಂದು ಹೇಳಿದರು ಚಂಪಾಣ್ಯದಲ್ಲಿ ಪ್ರಾಚಿನಕಾಲದಲ್ಲಿ ಋಷಿಗಳು ತಪಸ್ಸು ಮಾಡಿದ ಪ್ರದೇಶದಲ್ಲಿ ಗಾಂಧೀಜಿ ತಮ್ಮ ಜೀವನದ ಮಹದುದ್ದೇಶವನ್ನು ಮನಗಂಡರು ಹಾಗೂ ಭಾರತವನ್ನು ಸ್ವತಂತ್ರಗೊಳಿಸುವ ಆಯುಧವನ್ನು ರೂಪಿಸಿದರು

ಗಾಂಧೀಜಿ ಅವರು ರೈತರ ಮೊದಲನೇ ಯಶಸ್ವಿ ರೈತನೇತಾರರು ಎಂದರೆ ತಪ್ಪಾಗಲಾರದು. ■



ಸರ್ವೋದಯ ಕಾರ್ಯಕರ್ತೆ

# ಚನ್ನಮ್ಮ ಹಳ್ಳಿಕೇರಿಯವರಿಗೆ ಅಂತಿಮ ನಮನ

ಹಿರಿಯ ಸರ್ವೋದಯ ಕಾರ್ಯಕರ್ತೆ ಗಾಂಧಿವಾದಿ ಚನ್ನಮ್ಮ ಹಳ್ಳಿಕೇರಿಯವರು ದಿನಾಂಕ 21 .12 .2023 ರಂದು ಮಹಾರಾಷ್ಟ್ರದ ವಾರ್ದಾ ದಲ್ಲಿರುವ ಪೌನಾರ್ ಆಶ್ರಮದಲ್ಲಿ ನಿಧನರಾದರು . ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಗುದ್ಲೆಪ್ಪ ಹಳ್ಳಿಕೇರಿ ಇವರ ಪರಿವಾರದಲ್ಲಿ 1930 ನವಂಬರ್ 24 ರಂದು ಹಾವೇರಿ ಜಿಲ್ಲೆಯ ಹೊಸರಿತ್ತಿ ಗ್ರಾಮದಲ್ಲಿ ಜನಿಸಿದ್ದ ಅವರಿಗೆ 93 ವರ್ಷಗಳಾಗಿತ್ತು .

ಹಿರಿಯ ಸ್ವಾತಂತ್ರ ಹೋರಾಟಗಾರರು, ಸರ್ವೋದಯ ಕಾರ್ಯಕರ್ತರು, ಭೂದಾನ ಚಳುವಳಿ ಹರಿಜನೋದ್ಧಾರ, ಖಾದಿ ಬಳಕೆ , ಮದ್ಯಪಾನ ನಿಷೇದ, ದೇವನಾಗರಿಲಿಪಿ ,ಅಭಿವೃದ್ಧಿ ಮಹಿಳಾ ಸಬಲೀಕರಣ ವಿನೋಭಾ ವಿಚಾರ ದಾರೆಗಳ ಪ್ರಚಾರ ಹಲವು ಹತ್ತು ಕಾರ್ಯಕ್ರಮಗಳ ಮೂಲಕ ಸಾರ್ವಜನಿಕ ಸೇವೆಯಲ್ಲಿ ತಮ್ಮನ್ನು ಅರ್ಪಿಸಿಕೊಂಡಿದ್ದರು.

ಇವರ ತಂದೆ ಮತ್ತು ತಾಯಿ ಇಬ್ಬರೂ ಕೂಡಾ ಪೂರ್ಣಾವಧಿ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಇವರ ತಾಯಿ 1932 ರಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಜೈಲು ಸೇರಿದಾಗ ಎರಡು ವರ್ಷದ ಬಾಲಕಿ ಚನ್ನಮ್ಮ ಹಳ್ಳಿಕೇರಿ ಕೂಡ ತಾಯಿಯ ಜೊತೆ ಸೆರೆಮನೆಯಲ್ಲಿದ್ದರು.

ಬಾಲ್ಯದಲ್ಲಿ ಮಹಾತ್ಮ ಗಾಂಧೀಜಿಯವರ ದರ್ಶನ ಪಡೆದ ಸುಶ್ರೀ ಚನ್ನಮ್ಮ ಹಳ್ಳಿಕೇರಿಯವರು ಸ್ವಾತಂತ್ರ್ಯ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು ಸ್ವಾತಂತ್ರ್ಯ ಹೋರಾಟದ ಕೇಂದ್ರವಾಗಿದ್ದ ಹೊಸರಿತ್ತಿ ಗ್ರಾಮದಲ್ಲಿ ಅವರ ತಾತ ಗುದ್ಲೆಪ್ಪ ಹಳ್ಳಿಕೇರಿ ಅವರು ಸ್ಥಾಪಿಸಿದ ಗಾಂಧೀ ಆಶ್ರಮದಲ್ಲಿ ಒಡನಾಟ ಹೊಂದಿದ್ದರು. 1930 ಮತ್ತು 1940 ದಶದಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಅವರ ತಾತನೊಂದಿಗೆ ಪಾಲ್ಗೊಂಡಿದ್ದರು. 15 ಹರೆಯದ ಚನ್ನಮ್ಮ ಹಳ್ಳಿಕೇರಿ ಮೀರಾ ತಾಯಿ ಕೊಪ್ಪಿಕರ್ ಅವರೊಂದಿಗೆ ಹಿರೇ ಕುಂಬಿ ಹಾಗೂ ಅರಸೀಕರೆ ಆಶ್ರಮದಲ್ಲಿ ಸಮಾಜ ಸೇವೆ ಸಲ್ಲಿಸಿದರು.

ಸಮಾಜ ಸೇವಕಿಯಾಗಿ ಕಸ್ತೂರ್ ಬಾ ಗಾಂಧಿ ಸ್ಮಾರಕ ಸಂಸ್ಥೆಯಲ್ಲಿ ಹಲವಾರು ವರ್ಷಗಳ ಕಾಲ ಅವರು ಸೇವೆ ಸಲ್ಲಿಸಿದ್ದರು . ಸರ್ವೋದಯ ಆಂದೋಲನದ ಅಂಗವಾಗಿ 1957 ರಲ್ಲಿ ವಿನೋಬಾ ಅವರ ಸಾಂಗತ್ಯಕ್ಕೆ ಬಂದ ಚನ್ನಮ್ಮನವರು ವಿನೋಬಾ ಜೊತೆ ಭಾರತದಾದ್ಯಂತ ಪ್ರವಾಸ ಮಾಡಿ ಭೂದಾನ ಚಳವಳಿಯಲ್ಲಿ ಭಾಗವಹಿಸಿದ್ದರು .ಬ್ರಹ್ಮಚರ್ಯದಲ್ಲಿ ನಂಬಿಕೆಯಿಟ್ಟು ಅವಿವಾಹಿತರಾಗಿಯೇ ಉಳಿದಿದ್ದರು .

ಅಮೇರಿಕಾ ಸೇರಿದಂತೆ ಸುಮಾರು 16 ಯುರೋಪ್ ರಾಷ್ಟ್ರಗಳಲ್ಲಿ ಪ್ರವಾಸ ಮಾಡಿ ಮಹಾತ್ಮ ಗಾಂಧೀಜಿಯವರ ಮತ್ತು ವಿನೋಬಾ ಭಾವೆಯವರ ಸರ್ವೋದಯ ತತ್ವಗಳ ಪ್ರಚಾರ ಮಾಡಿದ್ದರು.

ಭಾರತದ ಏಕೈಕ ದೇವನಾಗರಿ ಲಿಪಿಯಲ್ಲಿ ಪ್ರಕಟವಾಗುತ್ತಿದ್ದ 'ವಿಶ್ವನಾಗರಿ' ಕನ್ನಡ ಪತ್ರಿಕೆಯನ್ನು ಕಳೆದ 45 ವರ್ಷಗಳಿಂದ ಪ್ರಕಟಿಸುತ್ತಿದ್ದರು. ವಿನೋಬಾ ಅವರ ಗೀತಾ ಪ್ರವಚನ ಪುಸ್ತಕವನ್ನು ಕನ್ನಡದಲ್ಲಿ ಪ್ರಕಟಿಸಿದ್ದರು. ಕರ್ನಾಟಕ ಮತ್ತು ಮಹಾರಾಷ್ಟ್ರದ ಪೌನಾರ್ ಆಶ್ರಮದ ನಡುವೆ ಓಡಾಡಿಕೊಂಡು ಸರ್ವೋದಯ ಚಟುವಟಿಕೆಯಲ್ಲಿ ನಿರತರಾಗಿದ್ದ ಅವರು ರಾಷ್ಟ್ರವ್ಯಾಪಿಯಾಗಿ ಸರ್ವೋದಯ ಕಾರ್ಯಕರ್ತರಲ್ಲಿ ಮೆಚ್ಚುಗೆ ಗಳಿಸಿದ್ದರು .

ಅವರು ಕಳೆದ ಅರವತ್ತು ವರ್ಷಗಳಿಂದ ವಿನೋಬಾ ಭಾವೇ ಅವರು ಸ್ಥಾಪಿಸಿದ್ದ ಮಹಾರಾಷ್ಟ್ರದ ವಾರ್ದಾ ಬಳಿಯ ಪೌನಾರ್ ಆಶ್ರಮದಲ್ಲಿ ವಾಸವಾಗಿದ್ದರು.ಇವರ ಸರ್ವೋದಯ ಸೇವೆಯನ್ನು ಗುರುತಿಸಿ ಕರ್ನಾಟಕ ಸರ್ಕಾರ 2016 ರಲ್ಲಿ ಇವರಿಗೆ ಮಹಾತ್ಮ ಗಾಂಧಿ ಸೇವಾ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಈ ಪ್ರಶಸ್ತಿ ಮೊತ್ತ ಐದು ಲಕ್ಷ ರೂಗಳನ್ನು ಅವರು ಪೂರ್ಣವಾಗಿ ಸರ್ವೋದಯ ಚಟುವಟಿಕೆಗೆ ನೀಡಿದ್ದರು. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಕೂಡಾ ಇವರಿಗೆ ದೊರೆತಿತ್ತು . ಇದರಿಂದ ಲಭ್ಯವಾದ ಗೌರವ ಧನವನ್ನು ಸ್ವಂತಕ್ಕೆ ಬಳಸಿಕೊಳ್ಳದೆ ಗಾಂಧೀ ಹಾಗೂ ವಿಚಾರ ಪ್ರಚಾರಕ್ಕೆ ವಿನಿಯೋಗಿಸಿದ ಅಪ್ಪಟ ಸರ್ವೋದಯ ಕಾರ್ಯಕರ್ತೆ- ಚನ್ನಮ್ಮ ಹಳ್ಳಿಕೇರಿ

ಇವರು ಕಡೆಯಲ್ಲಿ ಹಲವು ದಿನಗಳ ಕಾಲ ಗಾಂಧೀ ಭವನದಲ್ಲಿ ವಾಸ್ತವ್ಯ ಹೂಡಿದ್ದು ನಂತರ ತಮ್ಮ ಇಳಿ ವಯಸ್ಸಿನಲ್ಲಿಯೂ ಅವರ ಕರ್ಮಭೂಮಿ ಪವನಾರ್ ಆಶ್ರಮಕ್ಕೆ ತೆರಳಿದ್ದರು. ಅಲ್ಲಿ ವಯೋಸಹಜ ವೃದ್ದಾಪ್ಯ ಸಹಜ ಕಾಯಿಲೆಯಿಂದಾಗಿ ನಮ್ಮನ್ನಗಲಿದರು. ಅವರ ಅಗಲಿಕೆಯಿಂದ ಗಾಂಧೀ ಹಾಗು ಸರ್ವೋದಯ ಬಳಗಕ್ಕೆ ಅಪಾರ ನೋವುಂಟಾಗಿದೆ. ಈ ಬಗ್ಗೆ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಸರ್ವೋದಯ ಬಳಗ ಸಂತಾಪ ಸೂಚಕ ನಿರ್ಣಯ ಕೈಗೊಂಡಿವೆ.

■



# The Green Gandhi

*- Ramachandra Guha*

**Gandhi advocated the planting of trees saying they would help in providing shade and shelter, aid in stabilising soil and water regimes, and display a human concern for non-human life**

Some thirty years ago, while reading a selection of Gandhi's writings published under the title, Industrialize - and Perish, I came across these striking remarks, first published in the issue of Young India for December 20, 1928: "God forbid that India should ever take to industrialization after the manner of the West. The economic imperialism of a single tiny island kingdom (England) is today keeping the world in chains. If an entire nation of 300 million took to similar economic exploitation, it would strip the world bare like locusts."

It is tempting to read these words in environmentalist terms, as a warning against the excesses of resource-intensive, energy-intensive industrial development. Indeed, by adopting these methods of (Western-inspired) economic exploitation, India and China are today truly threatening to strip the world bare like locusts.

As a critic of human greed, as an advocate of a decentralised, village-centred (and hence less rapacious) economy, as a pioneer of nonviolent protest against harmful or destructive State policies, Gandhi has long been claimed as an ancestor by the environmental movement. The most celebrated of Indian environmental initiatives, such as the Chipko and Narmada Bachao Andolans, have been led by individuals who proclaim themselves to be, in thought and deed, following in the footsteps of Gandhi. Gandhi had also been invoked as an exemplar by Western environmentalists, such as the late economist, E.F. Schumacher (the author of Small is Beautiful), and the ideologues of the influential German Green Party.

In this column, I want to strengthen the case for Gandhi the precocious Green by speaking of some other aspects of his thought which appear to have anticipated our current concerns. In particular, I wish to focus on some little-known

remarks he made about the importance of trees and tree cover.

In November 1925, Gandhi went to the desert region of Kutch in western India where the scanty rainfall and the lack of a perennial river had led to a scarcity of vegetation. His host was a social worker named Jayakrishna Indraji, whom Gandhi described as "a gem of Gujarat", and whom one online source describes as an "ethnobotanist". Born in 1849, twenty years before Gandhi, Jayakrishna was a self-trained botanist who later worked with Porbandar State (whose rulers Gandhi's own forefathers had once served). The botanist was dismayed by the lack of interest Indians took in plants and trees, remarking: "Europeans placed in their countries know and write about the plants of this country, and my countrymen would not know about the plants in their courtyard and those trampled under their feet." To combat this ignorance, Jayakrishna wrote a landmark study of the flora of the Barda hills of Porbandar which attracted the attention of the Maharao of Kutch, who then invited him to his own territory, where the ethnobotanist promoted reforestation in the deserts while researching and writing a book on the plants of the state.

After meeting Jayakrishna, Gandhi wrote that "he knows each tree and each leaf in Barda. He has such great faith in planting trees that he accords it a place of prime importance. And he believes that a great deal can be achieved by these means. His enthusiasm and his faith in this matter are infectious. I have long ago been infected by these. Both the ruler and the subjects can, if they wish, take full advantage of the presence in their midst of such a wise man and raise a beautiful forest."



Jayakrishna made Gandhi plant a tree in "a lovely open space", which the celebrated visitor thought was "the most pleasant function I performed in Kutch." On the same day, a society for the protection of trees was founded, which Gandhi hoped would be "crowned with success."

The efforts in Kutch of the botanist, Jayakrishna, made Gandhi recall the transformation he had witnessed in the once arid and desolate town in South Africa where he had practised law and cut his teeth as an activist. Thus Gandhi wrote: "Johannesburg was a similar region. Nothing but grass grew there at one time. There was not a single building. Within forty years this place had become a golden city. There was a time when people had to pay twelve annas for a single bucket of water and sometimes had to make do with soda-water. Sometimes they had to wash even their face and hands with the latter! Today, there is water there and there are trees also. From the very beginning, owners of gold mines converted the region into a relatively green belt and increased the amount of rainfall by enthusiastically bringing over saplings from far off places and planting them. There are other such instances also where the amount of rainfall has been reduced by deforestation and where it has been increased by afforestation."

One evening in his Sabarmati ashram some years later, Gandhi wanted to card cotton and make some slivers before going to bed. His devoted disciple, Mira, asked a young ashramite to bring from the garden a few leaves of the babul tree to apply to the gut of the bow. The boy brought a very large bunch, with each leaf tightly folded up. Mira, in relating the story, recalls her telling Gandhi wistfully, "the little leaves have all gone to sleep," and Gandhi answering, "with indignation and pity in his eyes," that "trees are living beings just like ourselves. They live and breathe, they feed and drink as we do, and like us they need sleep. It is a wretched thing to go and tear the leaves off a tree at night when it is



resting!" Gandhi, according to Mira's telling, was upset that the boy had brought such a large bunch, just as he had been upset at a recent public meeting where he had been greeted with huge garlands, with "masses of delicate blossoms" flung in his face and hung around his neck.

In an article simultaneously published in Gujarati and in English, Gandhi rendered this story in Mira's words and then added this extensive gloss of his own: "Let not the reader call this sentimental twaddle, or accuse me or Mirabai of hopeless inconsistency in that we swallow a camel when we eat vegetables by the cartload and strain at a gnat because we would not care to pluck a leaf from a tree having its night's rest. Even a butcher may be to a certain extent humane. Because a man eats mutton, he does not slaughter a herd of sheep when they are asleep. The essence of [humanity] consists in showing the utmost consideration to all life, animal as well as vegetable. He who in search of pleasure shows little consideration for others is surely less than [hu]man. He is thoughtless!"

After thus making the case for restraint in resource consumption, Gandhi then eulogised the place of trees in Indian culture. Thus, he wrote: "India has cultivated no small respect for trees and other sentient beings. The poet describes Damayanti going from tree to tree in the wood bewailing her lot. For her companions, Shakuntala had trees as also the birds and beasts. The great poet, Kalidasa, tells us how her separation from them all was painful to her."

We now know, as an article in The Guardian last year put it, that "with their natural capacity to sequester carbon — to draw it from the atmosphere and lock it up as wood — trees are a simple, easy-to-understand way of tackling the climate emergency." (See A beginners' guide to planting trees – and fighting the climate crisis). Gandhi himself was writing decades before the evidence of global warming and climate change induced by human activity became known. He advocated the planting of trees on other - and no less worthy - grounds: namely, that they would help in providing shade and shelter, aid in stabilising soil and water regimes, and display a human concern for non-human life. But of course, the climate emergency makes his words that much more prescient.

This column is being published shortly before World Environment Day, which falls on June 5. We may remember Gandhi's words and warnings on that day, but also on every other day of the year. Better known for his pursuit of non-violence in settling political disputes, for his commitment to inter-faith harmony, and for his struggle to abolish untouchability, Gandhi's legacy is also compellingly relevant if we wish to resolve the deepening environmental crisis that confronts us today.

*Courtesy: The Telegraph Online, 3.6.2023* ■



# ಮಹಾತ್ಮ ಗಾಂಧಿ ಅಂತಿಮ ಯಾತ್ರೆ :

## ಮಾಹಿತಿ ಮತ್ತು ಛಾಯಾಚಿತ್ರಗಳು

ದಿಲ್ಲಿಯ ಬಿರ್ಲಾ ಹೌಸ್ ನ ಆವರಣದಲ್ಲಿ ಜನವರಿ 30.1948 ರಂದು ಶುಕ್ರವಾರ ದಿನ ಬಾಪೂಜಿಯ ಹತ್ಯೆಯಾಯಿತು. ಆಗ ಸಮಯ ಸಂಜೆ 5 ಗಂಟೆ 17 ನಿಮಿಷವಾಗಿತ್ತು. ಪ್ರತಿನಿತ್ಯದ ಸಂಜೆಯ ಪ್ರಾರ್ಥನೆಗೆ ಹೊರಟಿದ್ದ ಮಹಾತ್ಮರಿಗೆ ನಮಸ್ಕಾರ ಮಾಡುವವರಂತೆ ಮುಂದೆ ನಿಂತು ಮೂರು ಗುಂಡು ಹೊಡೆದು ಹತ್ಯೆ ಮಾಡಿದ ಹಂತಕನ ಹೆಸರು ನಾಥೋರಾಮ್ ಗೋಡ್ಸೆ.

ಈ ಹಂತಕನ ಗುಂಡಿಗೆ ಬಲಿಯಾದ ಮಹಾತ್ಮ ಗಾಂಧೀಜಿಯವರು **'ಹೇ ರಾಮ್'** ಎನ್ನುತ್ತಾ ನೆಲಕ್ಕುರುಳಿದರು. ಬಾಪೂವಿನ ದೇಹವನ್ನು 18 ಗಂಟೆಗಳ ಕಾಲ ಅಂತಿಮ ದರ್ಶನಕ್ಕಾಗಿ ಅವರು ಅಂತಿಮ ದಿನಗಳಲ್ಲಿ ಉಳಿದು ಕೊಂಡಿದ್ದ ಬಿರ್ಲಾ ಹೌಸ್ ನಲ್ಲಿ ಇಡಲಾಗಿತ್ತು. ಮರುದಿನ 31ನೇ ತಾರೀಖಿನಂದು ಸುಮಾರು 5 ತಾಸುಗಳ ಕಾಲ ಮೆರವಣಿಗೆ ನಡೆಯಿತು.

ಬಿರ್ಲಾ ಹೌಸ್ ನಿಂದ ರಾಜ್ ಘಾಟ್ ಅಂದಾಜು 6 ಕಿಲೋಮೀಟರ್ ಅಂತರದಲ್ಲಿದೆ. ಅಲ್ಲಿಯವರೆಗೆ ಮಹಾತ್ಮನ ಅಂತಿಮಯಾತ್ರೆಯ ಮೆರವಣಿಗೆ ಜರುಗಿತು. ಭಾರತೀಯ ಸೇನೆಯ ವಾಹನದ ಮೇಲೆ ಬಾಪೂಜಿಯ ದೇಹವನ್ನು ಇರಿಸಲಾಗಿತ್ತು.

ಭಾರತದ ಪ್ರಥಮ ಪ್ರಧಾನಿ ಜವಹರಲಾಲ್ ನೆಹರು ಮತ್ತು ಉಪ ಪ್ರಧಾನಿ ಹಾಗೂ ಗೃಹ ಮಂತ್ರಿ ಸರ್ದಾರ್ ವಲ್ಲಭ ಬಾಯ್ ಪಟೇಲ್ ರು ದುಃಖಿಸುತ್ತ ಬಾಪೂವಿನ ದೇಹದ ಪಕ್ಕ ಕುಳಿತಿದ್ದರು. ಭಾರತದ ಭೂಸೇನೆ, ನೌಕಾಪಡೆ ಮತ್ತು ವಿಮಾನದಳದ 300 ಸೈನಿಕರು ಸೇನೆಯ ವಾಹನವನ್ನು ಹಗ್ಗಗಳಿಂದ ಎಳೆದು ತರುತ್ತಿದ್ದರು.

ಇಪ್ಪತ್ತು ಲಕ್ಷ ಜನರು ಗಾಂಧೀಜಿಯ ಅಂತಿಮ ಯಾತ್ರೆಯಲ್ಲಿ ಪಾಲ್ಗೊಂಡಿದ್ದರು. ಜನರು ರಸ್ತೆಯ ಅಕ್ಕ ಪಕ್ಕದಲ್ಲಿ ನಿಂತುಕೊಂಡು ಮರಗಳ ಮೇಲೆ ಏರಿ 'ರಾಷ್ಟ್ರಪಿತ' ನ ದೇಹವನ್ನು ವೀಕ್ಷಿಸಿದರು. ಪ್ರಪಂಚದಾದ್ಯಂತ ಟೆಲಿವಿಶನ್ ಮೂಲಕ ಕೋಟ್ಯಾಂತರ ಜನರು ಈ ಅಂತಿಮ ಯಾತ್ರೆಯನ್ನು ವೀಕ್ಷಣೆ ಮಾಡಿದರೆಂದು ಇತಿಹಾಸದಲ್ಲಿ ದಾಖಲಾಗಿದೆ.

ಬಾಪೂಜಿಯ ಅಂತ್ಯಸಂಸ್ಕಾರ 'ರಾಷ್ಟ್ರಮಟ್ಟದ ಅಂತ್ಯಸಂಸ್ಕಾರ' ವಾಗಿ ಪರಿಣಮಿಸಿತ್ತು. ಮಹಾತ್ಮನ ಅಂತ್ಯ ಸಂಸ್ಕಾರವನ್ನು ಮಾತ್ರ ಹೀಗೆ ಕರೆಯಲಾಗಿದೆ. ಬಾಪೂಜಿಯವರನ್ನು ಹೊರತು ಪಡಿಸಿ ಭಾರತದ ಮತ್ಯಾರಿಗೂ ಹೀಗೆ ಇಲ್ಲಿಯ ತನಕ ಈ ಗೌರವ ದೊರೆತಿಲ್ಲ.

ಅಂತೆಯೇ.. ವಿಶ್ವದ ನೂರಾರು ದೇಶಗಳ ಗಣ್ಯರಿಂದ ಸ್ವಯಂ ಪ್ರೇರಣೆಯಿಂದ ಭಾರತ ಸರಕಾರಕ್ಕೆ 4341 ಅಶ್ರುತರ್ಪಣ ಪತ್ರಗಳು ಬಂದಿದ್ದವು. ಸಾಂಕೇತಿಕವಾಗಿ ಕೆಲವು ಗಣ್ಯರ ಹೆಸರುಗಳನ್ನು ಹೇಳುವುದಾದರೆ; ಬ್ರಿಟಿಷ್ ಆಡಳಿತದ ಫಿಲಿಫ್ ನೋಯೆಲ್ ಬೇಕಾರ್, ನ್ಯೂಯಾರ್ಕ್ ಜರ್ನಲ್ ನ ಆಲ್ಬರ್ಟ್ ಡಿಚ್, ಅಮೆರಿಕೆಯ ಸೆನೆಟರ್ ವಾಂಡೆನ್ ಬರ್ಗ್, ಫ್ರಾಂಕ್ ಪರ್ಟರ್, ಖ್ಯಾತ ಲೇಖಿಕ ಪರ್ಲ್ ಬುಕ್, ಅಮೇರಿಕಾದ ಟೈಮ್ಸ್ ಪತ್ರಿಕೆಯ ಛಾಯಾಚಿತ್ರ ಪತ್ರಕರ್ತೆ ಬರ್ಕ್ ವೈಟ್, ಜನರಲ್ ಜಾರ್ಜ್ ಮಾರ್ಷಲ್, ಫ್ರಾನ್ಸ್ ದೇಶದ ರಾಷ್ಟ್ರಪತಿ ಟ್ರೂಮನ್, ಹೆಸರಾಂತ ಲೇಖಕ ಲೂಯಿಸ್ ಫಿಶರ್, ಸರ್ ಕ್ರಿಪ್ಸ್, ಗ್ರೇಟ್ ಬ್ರಿಟನ್ ನ ರಬ್ಬೈ, ಫ್ರಾನ್ಸ್ ನ ಸಮಾಜವಾದಿ ನೇತಾರ ಲಿಯೋನ್ ಬ್ಲಾಮ್ ಹೀಗೆ ಪ್ರಪಂಚದ ಸಾವಿರಾರು ಜನ ನಾಯಕರು ಅಗಲಿದ ನಮ್ಮ ರಾಷ್ಟ್ರಪಿತನ ಸಾವಿಗೆ ಕಂಬನಿ ಮಿಡಿದರು, ಆ ಕ್ಷಣ ಮಾನವ ಜಗತ್ತು ಬಿಕ್ಕಿ ಬಿಕ್ಕಿ ಅತ್ತಿತು.

ಗಾಂಧಿ ಒಬ್ಬರನ್ನು ಹೊರತು ಪಡಿಸಿ, ಈ ಕ್ಷಣದವರೆಗೂ ಇತಿಹಾಸದಲ್ಲಿ ನಡೆಯದ ಅಪರೂಪದ ಘಟನೆ ವಿಶ್ವ ಸಂಸ್ಥೆಯಲ್ಲಿ ನಡೆಯಿತು. ಬಾಪೂಜಿ ಹತ್ಯೆಯ ಸುದ್ದಿ ಜಗತ್ತಿನಾದ್ಯಂತ ಕಾಳ್ಗಿಚ್ಚಿನಂತೆ ಹಬ್ಬಿದ ಕೂಡಲೇ, ವಿಶ್ವಸಂಸ್ಥೆ ತನ್ನ ಧ್ವಜವನ್ನಷ್ಟೇ ಅಲ್ಲದೇ, ಭಾರತದ ಧ್ವಜವನ್ನಷ್ಟೇ ಅಲ್ಲದೇ, ತನ್ನೆಲ್ಲ ಸರ್ವ ಸದಸ್ಯ ರಾಷ್ಟ್ರಗಳ ಧ್ವಜಗಳನ್ನು ಅರ್ಧ ಮಟ್ಟಕ್ಕೇ ಇಳಿಸಿ ಅಗಲಿದ ನೇತಾರ ' ಮಾನವ ಪ್ರಪಂಚದ ಮಹಾ ನಾಯಕ ' ಮಹಾತ್ಮ ಗಾಂಧೀಜಿಯವರಿಗೆ ಅಂತಿಮ ನಮನ ಸಲ್ಲಿಸಿತು . ಮಾನವೀಯತೆಯ ಮಹಾಸಾಗರವೇ ಆಗಿದ್ದ ಗಾಂಧಿಯವರ ಹತ್ಯೆ ಭಾರತದಲ್ಲಿ ನಡೆದಿದೆ ಎಂದು ಹೇಳಿ " ಇಂದು ಜಗತ್ತಿನಲ್ಲಿ ಮಾನವೀಯತೆ ಸತ್ತಿತು " ಎಂದು ಅಡಿ ಟಿಪ್ಪಣಿ ಬರೆಯಿತು.

ಈ ಗೌರವ ಭಾರತವಷ್ಟೇ ಅಲ್ಲ ; ಪ್ರಪಂಚದ ಯಾವ ನಾಯಕನಿಗೂ ಈ ಕ್ಷಣದವರೆಗೆ ಸಂದಿಲ್ಲ, ಬಹುಶಃ ಮುಂದೆಯೂ ಯಾರಿಗೂ ಸಂದಲಿಕ್ಕಿಲ್ಲ. ಆ ಗೌರವವನ್ನು ಪಡೆದ ಪ್ರಪಂಚದ ಏಕೈಕ ನೇತಾರ ಅಂದರೆ ನಮ್ಮ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು ಮಾತ್ರ ಅನ್ನುವುದನ್ನು ನಾವು ಹೆಮ್ಮೆಯಿಂದ ನೆನಪಿನಲ್ಲಿ ಇಟ್ಟುಕೊಳ್ಳಬೇಕು.







ಅಂತಿಮ ಯಾತ್ರೆಯಲ್ಲಿ ಸೇರಿದ್ದ ಜನಸಾಗರ



ಬಿರ್ಲಾ ಮಂದಿರದಲ್ಲಿ ಬಾಪೂಜಿಯವರ ಪಾರ್ಥಿವ ಶರೀರ



ಭಾರತದ ಗಣ್ಯಾತಿ ಗಣ್ಯರು ನೆಲದ ಮೇಲೆ ಕುಳಿತು
ಮಹಾತ್ಮ ಗಾಂಧಿಗೆ ಅಂತಿಮ ನಮನ ಸಲ್ಲಿಸಿದರು.



ಮಹಾತ್ಮ ಗಾಂಧೀಜಿಯವರ ಪಾರ್ಥಿವ ಶರೀರವನ್ನು
ಸಾಗಿಸಿದ ಭಾರತೀಯ ಸೇನೆಯ ಪುಷ್ಪಾಲಂಕೃತ ವಾಹನ



ಅಂತಿಮ ಯಾತ್ರೆಯ ದೃಶ್ಯ ಸೆರೆ ಹಿಡಿಯಲು
ನಿಂತಿರುವ ಛಾಯಾ ಚಿತ್ರಗ್ರಾಹಕರು



ಶೋಕತಪ್ತ ಜನಸಾಗರದ ಮುಂದೆ ಸರ್ದಾರ್ ಪಟೇಲರ
ಸಾಂತ್ವನದ ಶೋಕ ನುಡಿಗಳು



ಮಹಾತ್ಮರ ಚಿತೆಯ ಮುಂದೆ ನಿಂತಿರುವ ಭಾರತದ ಪ್ರಧಾನಿ ನೆಹರು



ಚನ್ನಮ್ಮ ಹಳ್ಳಿಕೇರಿ ಅವರ ನಿಧನದ ಗೌರವಾರ್ಥ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ಸಂತಾಪ ಸಭೆ ನಡೆಸಿ ಅವರಿಗೆ ಗೌರವ ಸಲ್ಲಿಸಿತು.



ಚಿಕ್ಕ ಕೂಡ್ಲಿ ಗ್ರಾಮದಲ್ಲಿ ರಾಷ್ಟ್ರೀಯ ಸೇವಾ ಯೋಜನೆ ಘಟಕಗಳ ಸಹಯೋಗದೊಂದಿಗೆ ಕರ್ನಾಟಕ ರಾಜ್ಯ ಗಾಂಧಿ ಸ್ಮಾರಕ ನಿಧಿ ಹಾಗೂ ರಾಷ್ಟ್ರೀಯ ಶಿಕ್ಷಣ ಸಮಿತಿ ಸಹಯೋಗದಲ್ಲಿ ಏರ್ಪಡಿಸಿದ್ದ ಒಂದು ದಿನದ ಶ್ರಮದಾನ ಹಾಗೂ ಗಾಂಧಿ ಚಿಂತನಾ ಕಾರ್ಯಗಾರದಲ್ಲಿ ಸರ್ವೋದಯ ಮಂಡಳಿಯ ರಾಜ್ಯಾಧ್ಯಕ್ಷರಾದ ಡಾ. ಎಚ್.ಎಸ್. ಸುರೇಶ್ ರವರು ಗಾಂಧಿ ತತ್ವಗಳ ಪ್ರಸ್ತುತತೆ ಬಗ್ಗೆ ಉಪನ್ಯಾಸ ನೀಡಿದರು





ಹಿರಿಯ ಸಮಾಜವಾದಿ ಚಿಂತಕ ಹಾಗೂ ಶರಣ ಸಾಹಿತ್ಯ ಲೇಖಕ ಅನುಭವಿ ಪತ್ರಕರ್ತ ಶ್ರೀ ರಂಜಾನ್ ದರ್ಗಾ ಅವರಿಗೆ ಗಾಂಧಿ ಭವನದಲ್ಲಿ ಡಿ .ಎಸ್ ನಾಗಭೂಷಣ್ ವಿರಚಿತ ಗಾಂಧಿ ಕಥನ ಪುಸ್ತಕವನ್ನು ನೀಡಿ ಗೌರವಿಸಲಾಯಿತು .

